

ಕರ್ನಾಟಕ ಸರ್ಕಾರ

# ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಾರ್ಷಿಕ ವರದಿ

## ೧೯೯೪-೯೫

# ನೂತನ ಸರ್ಕಾರ ಬಂದ ನಂತರ ಪ್ರಮುಖ ನಿರ್ಧಾರಗಳು

ರಾಜ್ಯದಲ್ಲಿ ತಾಯಿ ಮತ್ತು ಮಕ್ಕಳ ಮರಣದ ಪ್ರಮಾಣವನ್ನು ಹೊಂದಿದ ಗುಲ್ಬರ್ಗ ವಿಭಾಗದ 4 ಜಿಲ್ಲೆಗಳು ಅಂದರೆ, ಬೀದರ್, ಗುಲ್ಬರ್ಗ, ರಾಯಚೂರು, ಬಳ್ಳಾರಿ ಮತ್ತು ಬೆಳಗಾಂ ವಿಭಾಗದ 2 ಜಿಲ್ಲೆಗಳು - ಬಿಜಾಪುರ, ಧಾರವಾಡ. ಈ ಜಿಲ್ಲೆಗಳಲ್ಲಿ ತಾಯಿ ಮತ್ತು ಮಕ್ಕಳ ಆರೋಗ್ಯಕ್ಕೆ ಹೆಚ್ಚಿನ ಗಮನವನ್ನು ಕೊಡಲಾಗಿದೆ. ಈ ಜಿಲ್ಲೆಗಳಲ್ಲಿ ಹೊಸದಾಗಿ ಉಪ ಕೇಂದ್ರಗಳನ್ನು ತೆಗೆಯುವುದು, ಉಪ ಕೇಂದ್ರಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಔಷಧಗಳನ್ನು ಸರಬರಾಜು ಮಾಡುವುದು, ಮಕ್ಕಳಲ್ಲಿ ಅತಿಸಾರವನ್ನು ತಡೆಗಟ್ಟಲು ವ್ಯಾಪಕ ಕ್ರಮವನ್ನು ಹಾಕಿಕೊಳ್ಳುವುದು ಮತ್ತು ನವಜಾತ ಶಿಶುಗಳಲ್ಲಿ ಕಡಿಮೆ ತೂಕವನ್ನು ಹೊಂದಿದ ಮಕ್ಕಳ ಆರೋಗ್ಯದ ಬಗ್ಗೆ ಹೆಚ್ಚಿನ ನಿಗಾ ಇಡುವುದು, ಅಲ್ಲದೆ, ಹೆರಿಗೆಯನ್ನು ಹೆಚ್ಚು ಆರೋಗ್ಯಕರವಾಗಿ ಮಾಡಲು ಮತ್ತು ಶುಚಿಯಾಗಿ ನಡೆಸಲು ಸಾಧ್ಯವಾಗುವಂತೆ ಬೇಕಾಗುವ ಡಿಸ್ಪೋಸಬಲ್ ಕಿಟ್ಟುಗಳನ್ನು ಮತ್ತು ಉಪಕರಣಗಳನ್ನು ಒದಗಿಸುವುದು ಇವೇ ಮೊದಲಾದ ಕಾರ್ಯಕ್ರಮಗಳಾಗಿವೆ.

2. ರಾಜ್ಯದಲ್ಲಿರುವ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಗಳ ಜನತೆಗೆ ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗದ ಜನತೆಗೆ ವಿಶೇಷ ಆರೋಗ್ಯ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಜೊತೆಗೆ ಅವರ ಆರೋಗ್ಯ ರಕ್ಷಣೆ ಮತ್ತು ಚಿಕಿತ್ಸೆಗೆ ಅನುವಾಗುವಂತೆ ವಿಶೇಷ ತಪಾಸಣಾ ಕಾರ್ಯಕ್ರಮಗಳನ್ನು ಮತ್ತು ಚಿಕಿತ್ಸೆಗೆ ಅನುಕೂಲವಾಗುವಂತೆ ಕಾರ್ಯಕ್ರಮಗಳನ್ನು ರೂಪಿಸಲು ಪ್ರಥಮ ಹಂತದಲ್ಲಿ ರಾಜ್ಯದಲ್ಲಿ 4 ಜಿಲ್ಲೆಗಳನ್ನು ಗುರುತಿಸಲಾಗಿದೆ. ಅವುಗಳು : ಗುಲ್ಬರ್ಗ ವಿಭಾಗದ ರಾಯಚೂರು ಜಿಲ್ಲೆ : ಬೆಳಗಾಂ ವಿಭಾಗದ ಬಿಜಾಪುರ : ಮೈಸೂರು ವಿಭಾಗದ ಮೈಸೂರು ; ಬೆಂಗಳೂರು ವಿಭಾಗದ ಕೋಲಾರ ಜಿಲ್ಲೆಗಳನ್ನು ಆರಿಸಲಾಗಿದೆ. ಈ ಜಿಲ್ಲೆಗಳಲ್ಲಿರತಕ್ಕ ದುರ್ಬಲ ವರ್ಗದ ಜನತೆಯನ್ನು ಕಾಲಾನುಕ್ರಮವಾಗಿ ಆರೋಗ್ಯ ತಪಾಸಣೆಗೆ ಗುರಿಪಡಿಸಿ, ಅವರಲ್ಲಿರ ಬಹುದಾದ ರೋಗ ರುಜಿನಗಳನ್ನು ಗುರುತಿಸಿ ಸೂಕ್ತ ಚಿಕಿತ್ಸೆಯನ್ನು ಉಚಿತವಾಗಿ ಒದಗಿಸುವ ವ್ಯಾಪಕವಾದ ಕಾರ್ಯ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. (ಇದಕ್ಕಾಗಿ ಜಿಲ್ಲಾ ಮಟ್ಟದಲ್ಲಿ ವಿಶೇಷ ಸಮಿತಿಯನ್ನು ರಚಿಸಲಾಗುವುದು.) ಹೃದ್ರೋಗ, ಕ್ಷಯ, ಅರ್ಬುದ ಮತ್ತು ಮೂತ್ರಪಿಂಡಗಳಿಗೆ ಸಂಬಂಧಿಸಿದ ರೋಗ ರುಜಿನಗಳನ್ನು ಕ್ಷಿಪ್ರದಲ್ಲಿ ಗುರುತಿಸಿ, ಅವರಿಗೆ ಉಚಿತವಾಗಿ ಚಿಕಿತ್ಸೆ ಒದಗಿಸಲಾಗುವುದು. ಇದಕ್ಕೆ ತಗಲುವ ವೆಚ್ಚವನ್ನು ಸರ್ಕಾರ ಪೂರ್ಣ ಪ್ರಮಾಣದಲ್ಲಿ ಭರಿಸುವುದು.

3. ರಾಜ್ಯದಲ್ಲಿ ಶಾಲಾ ಆರೋಗ್ಯ ಕಾರ್ಯಕ್ರಮಗಳನ್ನು ಬಲವರ್ಧನಗೊಳಿಸಲು ಶಾಲೆಗಳಲ್ಲಿ ಮಕ್ಕಳ ಆರೋಗ್ಯ ತಪಾಸಣೆ ಮತ್ತು ಮಕ್ಕಳನ್ನು ರೋಗ ರುಜಿನಗಳಿಂದ ದೂರವಿರಿಸಲು ರಕ್ಷಣಾ ವ್ಯವಸ್ಥೆಯನ್ನು ಮಾಡುವುದು ಮತ್ತು ಅವರಲ್ಲಿರತಕ್ಕ ರಕ್ತಹೀನತೆಯನ್ನು ಹೋಗಲಾಡಿಸಲು ರಕ್ತವರ್ಧಕ ಮಾತ್ರೆಗಳನ್ನು ಒದಗಿಸುವುದು

ಮತ್ತು ಅವರಲ್ಲಿರತಕ್ಕ ಸಣ್ಣ-ಪುಟ್ಟ ರೋಗಗಳನ್ನು ಗುರುತಿಸಿ. ಸೂಕ್ತ ಚಿಕಿತ್ಸೆಯನ್ನು ಮಾಡುವುದು ಇವೇ ಮೊದಲಾದ ಕಾರ್ಯಕ್ರಮಗಳಾಗಿವೆ.

4. ರಾಜ್ಯದ 2ನೇ ದರ್ಜೆಯ ಆಸ್ಪತ್ರೆಗಳನ್ನು ಬಲಪಡಿಸಿ, ಅವುಗಳಲ್ಲಿರತಕ್ಕ ಸಿಬ್ಬಂದಿ ವರ್ಗದವರಿಗೆ ವಿಶೇಷ ತರಬೇತಿ ಮತ್ತು ಬೇಕಾಗುವ ಸಲಕರಣೆಗಳನ್ನು ಒದಗಿಸುವುದರ ಜೊತೆಗೆ ಸಲಕರಣೆಗಳನ್ನು ಬಳಸುವ ವಿಧಾನದ ಜೊತೆಗೆ ವಿಶೇಷ ತರಬೇತಿಯನ್ನು ಕೊಡುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗಿದೆ. ಇದಕ್ಕಾಗಿ ಭಾರತ ಸರ್ಕಾರದ ಮತ್ತು ವಿದೇಶಿ ನೆರವನ್ನು ನಿರೀಕ್ಷಿಸಲಾಗಿದೆ. 2ನೇ ದರ್ಜೆ ಆಸ್ಪತ್ರೆಗಳನ್ನು ಬಲವರ್ಧಪಡಿಸಲು 500 ಕೋಟಿ ರೂ. ಗಳ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಇದೇ ರೀತಿ ತಾಲ್ಲೂಕು ಮಟ್ಟದ ಉಪ ವಿಭಾಗ ಮಟ್ಟದ ಮತ್ತು ಜಿಲ್ಲಾ ಮಟ್ಟದ ಆಸ್ಪತ್ರೆಗಳನ್ನು ಸಹ ಬಲಪಡಿಸಲಾಗುವುದು.

5. ರಾಜ್ಯದಲ್ಲಿ ಪರಿಣಿತರನ್ನು ಗುರುತಿಸಿದ್ದು, ರೋಗಿಗಳಿಗೆ ಪರಿಣಿತರ ಸೇವೆಯನ್ನು ಒದಗಿಸಲು ಅನುಕೂಲವಾಗುವಂತೆ ಅವರನ್ನು ವರ್ಗೀಕರಿಸಿ, ಆಸ್ಪತ್ರೆಗಳಿಗೆ ತೈನಾತಿ ಮಾಡುವ ವ್ಯಾಪಕವಾದ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ರಾಷ್ಟ್ರದಲ್ಲಿಯೇ ಒಂದು ಪರಿಣಿತರ ಸೇವೆಯನ್ನು ಒದಗಿಸಲು ರಾಜ್ಯ ಸರ್ಕಾರ ಮುಂದಾಗಿದೆ. ಈ ಸಾರ್ವಜನಿಕ ವರ್ಗಾವಣೆಯ ಕಾಲದಲ್ಲಿ ಇವರ ಸೇವೆಯನ್ನು ಸ್ಪೆಷಲಿಸ್ಟ್ ಹುದ್ದೆಗಳಿಗೆ ಅನುಗುಣವಾಗಿ ಭರ್ತಿಮಾಡಲಾಗುವುದು. ಸೀನಿಯರ್ ಸ್ಪೆಷಲಿಸ್ಟ್ ಹುದ್ದೆಗಳನ್ನು ಮತ್ತು ಸ್ಪೆಷಲಿಸ್ಟ್ ಹುದ್ದೆಗಳನ್ನು ಸಾಧ್ಯವಾದ ಮಟ್ಟಿಗೆ ತುಂಬಲಾಗುವುದು.

6. ಬಡಜನರ ಚಿಕಿತ್ಸೆಗೆ ಹಾಗೂ ತೀವ್ರ ತರವಾದ ರೋಗಗಳ ಚಿಕಿತ್ಸೆಗೆ ಅನುಕೂಲವಾಗುವಂತೆ ಒಂದು ನಿಧಿಯನ್ನು ಸ್ಥಾಪಿಸಲು ಯೋಜಿಸಲಾಗಿದೆ. ಈ ನಿಧಿಗೆ 100 ಕೋಟಿ ರೂ. ಗಳಷ್ಟು ಹಣವನ್ನು ಸಂಗ್ರಹಿಸಬೇಕೆಂದು ತೀರ್ಮಾನಿಸಲಾಗಿದೆ. ಪ್ರಥಮ ಹಂತದಲ್ಲಿ ಸರ್ಕಾರವು 10 ಕೋಟಿ ರೂ.ಗಳನ್ನು ನಿಧಿಗೆ ಒದಗಿಸಿದ್ದು, ಇದರ ಜೊತೆಗೆ ಸಾರ್ವಜನಿಕರಿಂದಲೂ, ಅನಿವಾಸಿ ಭಾರತೀಯರಿಂದಲೂ ಮತ್ತು ದಾನಿಗಳಿಂದಲೂ ಉಳಿದ ಹಣವನ್ನು ಪೂರೈಸಲಾಗುವುದು. ಇದಕ್ಕಾಗಿ ಪ್ರತ್ಯೇಕ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗುತ್ತಿದೆ.

ಜರ್ಮನ್‌ಪ್ರಾಜೆಕ್ಟ್ :

7. ಜರ್ಮನ್ ಸರ್ಕಾರದ ನೆರವಿನಿಂದ ರಾಜ್ಯದ ಐದು ಜಿಲ್ಲೆಗಳಲ್ಲಿ (ಬೀದರ್, ಗುಲ್ಬರ್ಗ, ರಾಯಚೂರು, ಬಳ್ಳಾರಿ ಮತ್ತು ಬಿಜಾಪುರ) 15 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು 30 ಹಾಸಿಗೆಗಳ ಸುಸಜ್ಜಿತ ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿಯೂ,

7(ಎ) 30 ಹಾಸಿಗೆಗಳನ್ನು ಹೊಂದಿರುವ 12 ಸಮುದಾಯ ಆರೋಗ್ಯ ಕೇಂದ್ರಗಳನ್ನು 50 ಹಾಸಿಗೆಗಳ ಸುಸಜ್ಜಿತ ಆಸ್ಪತ್ರೆಗಳನ್ನಾಗಿಯೂ ಹಾಗೂ

(ಬಿ) 10 ಸಮುದಾಯ ಆರೋಗ್ಯ ಕೇಂದ್ರಗಳು ಅಥವಾ ಸಾರ್ವಜನಿಕ ಆಸ್ಪತ್ರೆಗಳನ್ನು ಸುಸಜ್ಜಿತ 100 ಹಾಸಿಗೆಗಳ ಉಪ ಜಿಲ್ಲಾ ಮಟ್ಟದ ಆಸ್ಪತ್ರೆಗಳನ್ನಾಗಿ ಪರಿವರ್ತಿಸಲಾಗುವುದು. ಇಂತಹ ಪರಿವರ್ತನೆಗೆ ಬೇಕಾಗುವ ಅವಶ್ಯಕ ಪೂರೈಕೆಗಳನ್ನು ಜರ್ಮನ್ ಪ್ರಾಜೆಕ್ಟ್‌ನಿಂದ ಒದಗಿಸಿಕೊಳ್ಳಲಾಗುವುದು. ಅಲ್ಲದೆ, ಕಟ್ಟಡಗಳನ್ನು ಪುನಃಶ್ಚೇತನಗೊಳಿಸುವ ಮತ್ತು ಸೂಕ್ತ ಮಾರ್ಪಾಡುಗಳನ್ನು ಮಾಡುವ ಕಾಮಗಾರಿಗಳೂ ಸಹ ಸೇರಿರುತ್ತದೆ.

8) ಸಾಂಕ್ರಾಮಿಕ ರೋಗಗಳ ನಿಯಂತ್ರಣದಲ್ಲಿ ಕರಳು ಬೇನೆ, ಕಾಲರಾ, ಅರಶಿನ ಕಾಮಾಲೆ, ಮಂಗನ ಖಾಯಿಲೆ ಹಾಗೂ ಪ್ಲೇಗ್ ರೋಗಗಳನ್ನು ನಿಯಂತ್ರಿಸಲಾಗುತ್ತಿದೆ. ಕಳೆದ ಸಾಲಿನಲ್ಲಿ ರಾಜ್ಯದ ಹಲವಾರು ಜಿಲ್ಲೆಗಳಲ್ಲಿ ಪ್ಲೇಗ್ ರೋಗವು ತಲೆದೋರಿದ್ದು, ಕ್ಷಿಪ್ರದಲ್ಲಿ ಅದನ್ನು ತಡೆಗಟ್ಟಲಾಯಿತು. ಈ ರೋಗಗಳ ನಿಯಂತ್ರಣಕ್ಕಾಗಿ 10.00 ಲಕ್ಷ ರೂ.ಗಳನ್ನು ಈ ಸಾಲಿನ ಅನುದಾನದಲ್ಲಿ ಇರಿಸಿಕೊಳ್ಳಲಾಗಿದೆ.

9) ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮವನ್ನು ಎಲ್ಲಾ ಜಿಲ್ಲೆಗಳಲ್ಲೂ ಪ್ರಾರಂಭಿಸಲಾಗಿದೆ. ಬಹುವಿಧ ಔಷಧಿ ಚಿಕಿತ್ಸಾ ಕ್ರಮವನ್ನು 1986ರಲ್ಲಿ ರಾಜ್ಯದ 10 ಜಿಲ್ಲೆಗಳಲ್ಲಿ ಪ್ರಾರಂಭಿಸಲಾಗಿದೆ. (ಬೆಳಗಾಂ, ಧಾರವಾಡ, ಗುಲ್ಬರ್ಗ, ರಾಯಚೂರು, ಬೀದರ್, ಬಳ್ಳಾರಿ, ವಿಜಾಪುರ, ಮೈಸೂರು, ಮಂಡ್ಯ, ಬೆಂಗಳೂರು ನಗರ ಜಿಲ್ಲೆ.) 1996ರಲ್ಲಿ ಉಳಿದ ಜಿಲ್ಲೆಗಳಲ್ಲೂ ಸಹ ಬಹುವಿಧ ಚಿಕಿತ್ಸಾ ಕಾರ್ಯಕ್ರಮವನ್ನು ಪ್ರಾರಂಭಿಸಲಾಗುವುದು. (ಕೆಲವು ಯೋಜನೆಗಳು ಭಾರತ ಸರ್ಕಾರದ ಪೂರ್ಣ ನೆರವಿನಿಂದಲೂ, ಕೆಲವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಮಭಾಗತ್ವದಲ್ಲಿ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮಗಳನ್ನು ಅಳವಡಿಸಿದೆ.)

10) ಅಂಧತ್ವ ನಿವಾರಣೆಗಾಗಿ ಸಂಚಾರಿ ನೇತ್ರ ಚಿಕಿತ್ಸಾ ಘಟಕಗಳನ್ನು ಜಿಲ್ಲೆಗಳಲ್ಲಿ ಸ್ಥಾಪಿಸಲಾಗಿದೆ. ಈ ಸಂಚಾರಿ ಘಟಕಗಳನ್ನು ನೇತ್ರ ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸಿ, ಕಣ್ಣಿನ ಪೊರೆ ಶಸ್ತ್ರಚಿಕಿತ್ಸೆಗಳನ್ನು ನಡೆಸಲಾಗುತ್ತಿದೆ. ಡ್ಯಾನಿಡಾ ನೆರವಿನಿಂದ ಎಲ್ಲಾ ಜಿಲ್ಲೆಗಳಲ್ಲಿಯೂ ಅಂಧತ್ವ ನಿವಾರಣಾ ಸಂಸ್ಥೆಗಳನ್ನು ಸ್ಥಾಪಿಸಿ, ನೇತ್ರ ಚಿಕಿತ್ಸೆಗೆ ಈ ಸಂಸ್ಥೆಗಳಿಂದ ವ್ಯಾಪಕವಾದ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಗುತ್ತಿದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ನೇತ್ರ ಪರೀಕ್ಷಕರ ಹುದ್ದೆಗಳನ್ನು ಮಂಜೂರು ಮಾಡಿದ್ದು, ಇವರು ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ಬರತಕ್ಕ ಅಂಧರನ್ನು ಗುರುತಿಸಿ ಅವರಿಗೆ ಚಿಕಿತ್ಸಾ ವ್ಯವಸ್ಥೆಯನ್ನು ಮಾಡಲು ನೆರವಾಗುತ್ತಾರೆ. ಜಿಲ್ಲಾ ಆಸ್ಪತ್ರೆಗಳಲ್ಲಿ ಅಂಧತ್ವ ನಿವಾರಣೆಗಾಗಿ ತಜ್ಞ ವೈದ್ಯರ ಸೇವೆಯನ್ನು ಒದಗಿಸಲಾಗಿದೆ. ಹಾಗೂ ನೇತ್ರ ಚಿಕಿತ್ಸಾ ಶಸ್ತ್ರಾರ್ಥಿಗಳಿಗೆ ವಿಶೇಷ ಹಾಸಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.

11) **ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದಲ್ಲಿ :** ಜ್ವರಪೀಡಿತ ರೋಗಿಗಳಿಂದ ರಕ್ತ ಲೇಪನಗಳನ್ನು ಸಂಗ್ರಹಿಸಿ, ದೃಢಪಟ್ಟ ರೋಗಿಗಳಿಗೆ ರೋಗ ಮೂಲೋತ್ಪಟನ ಚಿಕಿತ್ಸೆಯನ್ನು ಕೊಡುವ ವ್ಯಾಪಕ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಹಾಗೂ

ರೋಗವನ್ನು ಹರಡದಂತೆ ತಡೆಗಟ್ಟಲು ಕೀಟ ನಾಶಕಗಳ ಸಿಂಪರಣೆಯನ್ನು ಸೋಂಕು ವ್ಯಾಪಕವಾಗಿರುವ ಪ್ರದೇಶಗಳಲ್ಲಿ ಕೈಗೊಳ್ಳಲಾಗುವುದು. ಆಯ್ದ ಪ್ರದೇಶಗಳಲ್ಲಿ ಸೊಳ್ಳೆಗಳ ನಿಯಂತ್ರಣವನ್ನು ನೈಸರ್ಗಿಕ ಪರಿಸರ ನಿಯಂತ್ರಣ ಕಾರ್ಯಕ್ರಮಗಳ ಮೂಲಕ ಹತೋಟಿ ಮಾಡಲು ವ್ಯವಸ್ಥೆಯನ್ನು ಸಹ ಮಾಡಲಾಗಿದೆ.

12) ಏಯ್ಡ್ಸ್ ನಿಯಂತ್ರಣ ಕಾರ್ಯಕ್ರಮದಲ್ಲಿ ರಾಜ್ಯದ ರಕ್ತನಿಧಿಗಳನ್ನು ಬಲಪಡಿಸುವುದರ ಜೊತೆಗೆ ಜೋನಲ್ ಕೇಂದ್ರಗಳನ್ನು ಸ್ಥಾಪಿಸಿ, ಶಂಕಿತ ರೋಗಿಗಳಿಂದ ಸಂಗ್ರಹಿಸಿದ ರಕ್ತ ಮಾದರಿಗಳನ್ನು ಪರೀಕ್ಷಿಸಿ ರೋಗವನ್ನು ಪತ್ತೆಹಚ್ಚುವ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಚಿಕಿತ್ಸೆಗೆ ಪರಿಣಾಮಕಾರಿಯಾದ ವ್ಯವಸ್ಥೆ ಇಲ್ಲದಿರುವುದರಿಂದ, ರೋಗ ನಿಯಂತ್ರಣಕ್ಕೆ ಪ್ರಚಾರ ಕಾರ್ಯಕ್ರಮಗಳನ್ನು ವ್ಯಾಪಕವಾಗಿ ಅಳವಡಿಸಿಕೊಳ್ಳಲಾಗಿದೆ.

13) **ಪೌಷ್ಟಿಕ ಆರೋಗ್ಯ ಕಾರ್ಯಕ್ರಮದಲ್ಲಿ :** ವಿಟಮಿನ್ 'ಎ' ಅನ್ನಾಂಗದ ಕೊರತೆಯನ್ನು ನಿವಾರಿಸಲು ತೋಟಗಾರಿಕಾ ಇಲಾಖೆ, ಶಿಕ್ಷಣ ಇಲಾಖೆ ಹಾಗೂ ಮಹಿಳಾ ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಇಲಾಖೆಯ ನೆರವಿನೊಂದಿಗೆ ಸಮೀಕ್ಷೆ ನಡೆಸಿ, ಈ ಇಲಾಖೆಗಳ ಸಹಕಾರದೊಂದಿಗೆ ಸುಲಭವಾಗಿ ಸ್ಥಳೀಯವಾಗಿ ದೊರಕುವ 'ಎ' ಅನ್ನಾಂಗವನ್ನು ಹೆಚ್ಚು ಪ್ರಮಾಣದಲ್ಲಿ ಹಸಿರು ತರಕಾರಿ, ಸೊಪ್ಪು ಮತ್ತು ಸುಲಭ ಸಾಧ್ಯವಾದ ಹಣ್ಣುಗಳ ಮೂಲಕ ಪಡೆಯುವ ವ್ಯವಸ್ಥೆಯನ್ನು ಶಿಕ್ಷಣ ಮಾಧ್ಯಮದ ಮುಖಾಂತರ ಪ್ರಚುರಪಡಿಸುವುದರ ಜೊತೆಗೆ - 3 ವರ್ಷದೊಳಗಿನ ಮಕ್ಕಳಿಗೆ ವಿಟಮಿನ್ 'ಎ' ಅನ್ನಾಂಗವನ್ನು ವಿತರಣೆ ಮಾಡುವ ಕಾರ್ಯಕ್ರಮವನ್ನು ಕೋಲಾರ ಜಿಲ್ಲೆಗೆ ರೂಪಿಸಲಾಗಿದೆ.

14) **ಗಳಗಂಡ ನಿಯಂತ್ರಣ ಕಾರ್ಯಕ್ರಮದಲ್ಲಿ :** ರಾಜ್ಯದಲ್ಲಿನ ಎಲ್ಲಾ ಜಿಲ್ಲೆಗಳಲ್ಲಿ ಸಮೀಕ್ಷೆ ನಡೆಸಿದ್ದು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉತ್ತರ ಕನ್ನಡ, ಕೊಡಗು ಜಿಲ್ಲೆಗಳಲ್ಲಿ ಅಯೋಡಿನ್‌ರಹಿತ ಉಪ್ಪನ್ನು ನಿಷೇಧಿಸಿ, ಅಯೋಡಿನ್ ಹೊಂದಿದ ಲವಣವನ್ನು ಮಾತ್ರ ವಿತರಣೆ ಮಾಡುವಂತೆ ಪ್ರಕಟಣೆಯನ್ನು ಹೊರಡಿಸಲಾಗಿದೆ. ಇದರಿಂದ ಗಳಗಂಡ ಖಾಯಿಲೆಯ ಪ್ರಮಾಣವನ್ನು ಕುಂಠಿತಗೊಳಿಸಲಾಗಿದೆ.

15) ಮಕ್ಕಳಲ್ಲಿ ಅತಿಸಾರ ಬೇಧಿಯನ್ನು ನಿಯಂತ್ರಿಸಲು ಒ.ಆರ್.ಎಸ್. ಪಟ್ಟಣಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಸುಲಭ ಸಾಧನವಾಗಿ ದೊರೆಯುವಂತೆ ಮಾಡಲು ಮತ್ತು ಅದನ್ನು ಬಳಸುವ ಮಾದರಿಯನ್ನು ಶಿಕ್ಷಣ ಸಾಮಗ್ರಿಗಳ ಮೂಲಕ ಪ್ರಚಾರ ಪಡಿಸಲಾಗಿದೆ. ಆರೋಗ್ಯ ಉಪ ಕೇಂದ್ರಗಳಲ್ಲಿ ಮತ್ತು ಆರೋಗ್ಯ ಸಂಸ್ಥೆಗಳಲ್ಲಿ, ಅಂಗನವಾಡಿ ಕೇಂದ್ರಗಳಲ್ಲಿ ಜನರಿಗೆ ಸುಲಭ ಸಾಧ್ಯವಾಗಿ ದೊರೆಯುವಂತೆ ಒ. ಆರ್. ಎಸ್. ಪಟ್ಟಣಗಳನ್ನು ಇರಿಸಲಾಗಿದೆ.

16) ರಾಜ್ಯದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗಳಲ್ಲಿ ಇರತಕ್ಕ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ತೆಗೆದುಕೊಳ್ಳಲಾಗಿದೆ. ಈಗಾಗಲೇ ಈ

ಸಾಲಿನಲ್ಲಿ ಗುತ್ತಿಗೆ ಆಧಾರದ ಮೇಲೆ ವೈದ್ಯರ ಹುದ್ದೆಗಳನ್ನು ತುಂಬಲಾಗಿದೆ. ಇತರೆ ಹುದ್ದೆಗಳನ್ನು ಸಹ ತುಂಬಲು ಯೋಜಿಸಲಾಗಿದೆ.

17) ಆಡಳಿತದಲ್ಲಿ ಶಿಸ್ತನ್ನು ಹೆಚ್ಚು ಮಾಡಲು ಅನಧಿಕೃತ ಗೈರು ಹಾಜರಾಗಿರುವ ಸಿಬ್ಬಂದಿ ವರ್ಗದವರ ಮೇಲೆ ಕಠಿಣವಾಗಿ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು. ಹಾಗೂ ರಾಜ್ಯದಲ್ಲಿರುವ ಆಸ್ಪತ್ರೆಗಳನ್ನು ಮೇಲಾಧಿಕಾರಿಗಳು ಮೇಲಿಂದ ಮೇಲೆ ಪರಿವೀಕ್ಷಣೆ ನಡೆಸಿ, ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮತ್ತು ಇತರೆ ಆಸ್ಪತ್ರೆಗಳಲ್ಲಿ ಹೆಚ್ಚಿನ ಶಿಸ್ತಿನ ವಾತಾವರಣವನ್ನು ಮೂಡಿಸುವುದು ಇವೇ ಮೊದಲಾದ ಕಾರ್ಯ ಕ್ರಮಗಳನ್ನೊಳಗೊಂಡಿದೆ.

# ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

**ಮುನ್ನೋಟ :-**

ಸಾರ್ವಜನಿಕ ಆರೋಗ್ಯ ಪ್ರಾಮುಖ್ಯತೆಯ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದು. ರಾಜ್ಯದ ಜನತೆಗೆ ಆರೋಗ್ಯ ಸೇವೆಗಳನ್ನು ವಿವಿಧ ಮಾದರಿಯ ಆರೋಗ್ಯ ಸಂಸ್ಥೆಗಳ ಮೂಲಕ ಒದಗಿಸುವುದು ಇಲಾಖೆಯ ಉದ್ದೇಶವಾಗಿರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಆರೋಗ್ಯ ಸೇವೆಗಳನ್ನು. ಕೆಳಕಂಡ ಕಾರ್ಯಕ್ರಮಗಳ ಮೂಲಕ ಒದಗಿಸುತ್ತದೆ.

1) ಕನಿಷ್ಠಾವಶ್ಯಕತೆಗಳ ಯೋಜನೆಯ ಅಂಶವಾದ ಗ್ರಾಮೀಣ ಆರೋಗ್ಯ ಯೋಜನೆ.

2) ವೈದ್ಯಕೀಯ ಅಭಿವೃದ್ಧಿ ಕಾರ್ಯಕ್ರಮ.

3) ತಾಯಿ, ಮಕ್ಕಳ ಆರೋಗ್ಯ, ಕುಟುಂಬ ಕಲ್ಯಾಣ ಕಾರ್ಯಕ್ರಮ ಮತ್ತು ಲಸಿಕೆ ಕಾರ್ಯಕ್ರಮ.

4) ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ.

5) ರಾಷ್ಟ್ರೀಯ ಕ್ಷಯ ರೋಗ ನಿಯಂತ್ರಣ ಕಾರ್ಯಕ್ರಮ.

6) ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ.

7) ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ ಮತ್ತು ರಾಷ್ಟ್ರೀಯ ಫೈಲೇರಿಯ ರೋಗ ನಿಯಂತ್ರಣ ಕಾರ್ಯಕ್ರಮ.

8) ಸೋಂಕು ರೋಗಗಳಾದ ಅತಿಸಾರ ರೋಗಗಳು ಕ್ಯಾಸನೂರು ಅರಣ್ಯ ಖಾಯಿಲೆ. ಜಪಾನೀಸ್ ಎನ್‌ಸಫಲೈಟಿಸ್ ನಿಯಂತ್ರಣ ಮತ್ತು ತಡೆಗಟ್ಟುವಿಕೆ.

9) ಆರೋಗ್ಯ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮ.

10) ಪೌಷ್ಠಿಕ ಆಹಾರ ಕಾರ್ಯಕ್ರಮ - ಪೌಷ್ಠಿಕ ಆಹಾರದ ಬಗ್ಗೆ ಶಿಕ್ಷಣ ಮತ್ತು ಪ್ರಾತ್ಯಕ್ಷಿಕತೆ.

11) ರಾಷ್ಟ್ರೀಯ ಗಳಗಂಡ ನಿಯಂತ್ರಣ ಕಾರ್ಯಕ್ರಮ.

12) ಪ್ರಯೋಗಾಲಯ ಸೇವೆಗಳು ಮತ್ತು ಲಸಿಕೆ ತಯಾರಿಕಾ ಘಟಕಗಳು.

13) ಶಿಕ್ಷಣ ಮತ್ತು ಪರಿಸರ ನೈರ್ಮಲ್ಯ ಕಾರ್ಯಕ್ರಮ.

14) ರೋಗ ಪರಿಹಾರಕ ಸೇವೆಗಳು.

**ಆಡಳಿತ ಮತ್ತು ನಿರ್ದೇಶನ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಆಡಳಿತ ಮತ್ತು ಆರ್ಥಿಕ ಜವಾಬ್ದಾರಿಯು ಇಲಾಖೆಯ ನಿರ್ದೇಶಕರದಾಗಿರುತ್ತದೆ. ನಿರ್ದೇಶಕರು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು. ಇವರು ರಾಜ್ಯದಲ್ಲಿ ವಿವಿಧ ರಾಷ್ಟ್ರೀಯ ಹಾಗೂ ಕುಟುಂಬ ಕಲ್ಯಾಣ ಸೇವೆಗಳನ್ನೊಳಗೊಂಡಂತೆ ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯ ರೂಪಕ್ಕೆ ತರಲು ಜವಾಬ್ದಾರರಾಗಿರುತ್ತಾರೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಅಪರ ನಿರ್ದೇಶಕರು (ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ). ಅಪರ ನಿರ್ದೇಶಕರು (ಪಿಯ್ಸ್). ಹದಿನಾಲ್ಕು ಸಹ ನಿರ್ದೇಶಕರುಗಳು. ಒಬ್ಬರು ಡೆಮೋಗ್ರಾಫರ್ ಮತ್ತು ಹದಿನಾರು ಉಪ ನಿರ್ದೇಶಕರುಗಳು ನೆರವಾಗುತ್ತಾರೆ. ಮತ್ತು ಈ ಅಧಿಕಾರಿಗಳು ತಾಂತ್ರಿಕ ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಒಬ್ಬರು ಮುಖ್ಯ ಲೆಕ್ಕಪತ್ರಾಧಿಕಾರಿ ಹಾಗೂ ಆರ್ಥಿಕ ಸಲಹೆಗಾರರು ಮತ್ತು ಒಬ್ಬರು ಮುಖ್ಯ ಆಡಳಿತಾಧಿಕಾರಿಗಳು ಇದ್ದು. ಇವರುಗಳು ಕ್ರಮವಾಗಿ ಇಲಾಖೆಗೆ ಸಂಬಂಧಿಸಿದ ಹಣಕಾಸು ಮತ್ತು ಲೆಕ್ಕಪತ್ರ. ಆಡಳಿತಕ್ಕೆ ಸಂಬಂಧಪಟ್ಟಂತೆ ನಿರ್ದೇಶಕರಿಗೆ ನೆರವಾಗುತ್ತಾರೆ.

ವಿಭಾಗ ಮಟ್ಟದಲ್ಲಿ ನಾಲ್ಕು ಮಂದಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವಿಭಾಗೀಯ ಸಹ ನಿರ್ದೇಶಕರುಗಳಿದ್ದು. ಇವರು ಬೆಂಗಳೂರು. ಬೆಳಗಾವಿ. ಗುಲ್ಬರ್ಗಾ ಮತ್ತು ಮೈಸೂರಿನಲ್ಲಿ ವಿಭಾಗೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರುಗಳಿಗೆ ಸಹಾಯಕರುಗಳಾಗಿ ತಲಾ ಇಬ್ಬರಂತೆ ಉಪ ನಿರ್ದೇಶಕರುಗಳು ಇರುತ್ತಾರೆ.

ವಿಭಾಗೀಯ ಸಹ ನಿರ್ದೇಶಕರುಗಳು ಅವರವರ ಅಧಿಕಾರ ವ್ಯಾಪ್ತಿಯೊಳಗೆ ಬರುವ ಜಿಲ್ಲೆಗಳಲ್ಲಿ ಪರ್ಯಾವೇಕ್ಷಣೆ ನಡೆಸುವುದು ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕಾರ್ಯಾಚರಣೆಗೆ ತರುವುದಕ್ಕೆ ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ 20 ಮಂದಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಇರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ನೆರವಿಗೆ ಜಿಲ್ಲಾ ಕುಷ್ಠರೋಗಾಧಿಕಾರಿಗಳು. ಜಿಲ್ಲಾ ತಾಯಿ ಮತ್ತು ಮಕ್ಕಳ ಆರೋಗ್ಯ ಅಧಿಕಾರಿಗಳು (ಹಿಂದಿನ ಜಿಲ್ಲಾ ಲಸಿಕೆ ಅಧಿಕಾರಿಗಳು). ಜಿಲ್ಲಾ ಮಲೇರಿಯಾಧಿಕಾರಿಗಳು. ಜಿಲ್ಲಾ ಕ್ಷಯ ರೋಗಾಧಿಕಾರಿಗಳು. ಜಿಲ್ಲಾ ಪ್ರಯೋಗಶಾಲೆಗಳಲ್ಲಿನ ಅಧಿಕಾರಿಗಳು. ವೈದ್ಯಾಧಿಕಾರಿಗಳು (ಕುಟುಂಬ ಕಲ್ಯಾಣ ಮತ್ತು ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು) ಮತ್ತು ಪ್ರಾದೇಶಿಕ ಸಹಾಯಕ ರಸಾಯನಿಕ ವಿಶ್ಲೇಷಕರುಗಳು ಇರುತ್ತಾರೆ. ಇವರುಗಳು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾ ಆಸ್ಪತ್ರೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರುಗಳು ರೋಗ ಪರಿಹಾರಕ ಸೇವೆಗಳನ್ನು ಒದಗಿಸುವುದಕ್ಕೆ ಜವಾಬ್ದಾರರಾಗಿರುತ್ತಾರೆ. ಜಿಲ್ಲಾ ಆಸ್ಪತ್ರೆಗಳು ಪರಾಮರ್ಶಕ ಆಸ್ಪತ್ರೆಗಳಾಗಿಯೂ ಕಾರ್ಯ ನಿರ್ವಹಿಸುತ್ತಿವೆ.

ಉಪವಿಭಾಗ ಮಟ್ಟದಲ್ಲಿ 49 ಸಹಾಯಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು. ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನು ಒಳಗೊಂಡಂತೆ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮಟ್ಟದಲ್ಲಿ ವೈದ್ಯಾಧಿಕಾರಿಗಳು ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

**1994 - 95ನೇ ಸಾಲಿನ ಸಾಧನೆಗಳು (ಡಿಸೆಂಬರ್ 94ರ ಅಂತ್ಯದವರೆಗೆ)**

ಸರ್ಕಾರವು 1994-95ನೇ ಸಾಲಿನಲ್ಲಿ ಈ ಕೆಳಕಂಡವುಗಳಿಗೆ ಮಂಜೂರಾತಿಯನ್ನು ನೀಡಿದೆ.

1. 33 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆ.
2. 11 ಸಮುದಾಯ ಆರೋಗ್ಯ ಕೇಂದ್ರಗಳ ಸ್ಥಾಪನೆ.
3. **ಪ್ರಸೂತಿ ಗೃಹಗಳು :-**
    1. ಹೊಳಲು ಪ್ರಾಥಮಿಕ ಆರೋಗ್ಯ ಕೇಂದ್ರ. ಮಂಡ್ಯ ತಾ॥ ಮಂಡ್ಯ ಜಿಲ್ಲೆ.
    2. ಸಿಂಗಟಗೆರೆ ಪ್ರಾಥಮಿಕ ಆರೋಗ್ಯ ಕೇಂದ್ರ. ಕಡೂರು ತಾ॥, ಚಿಕ್ಕಮಗಳೂರು ಜಿಲ್ಲೆ
    3. ಚಂದ್ರಪ್ಪ ವೃತ್ತ ಪ್ರಾಥಮಿಕ ಆರೋಗ್ಯ ಕೇಂದ್ರ. ಬೆಂಗಳೂರು ದಕ್ಷಿಣ ತಾ:. ಬೆಂಗಳೂರು ಜಿಲ್ಲೆ.
    4. ಓರೇಬೈಲು ಪ್ರಾಥಮಿಕ ಆರೋಗ್ಯ ಕೇಂದ್ರ. ಮೂಡಿಗೆರೆ ತಾ॥. ಚಿಕ್ಕಮಗಳೂರು ಜಿಲ್ಲೆ.
    5. ಕೈವಾರ ಪ್ರಾಥಮಿಕ ಆರೋಗ್ಯ ಕೇಂದ್ರ. ಚಿಂತಾಮಣಿ ತಾ॥. ಕೋಲಾರ ಜಿಲ್ಲೆ.
    6. ಬಾಗಲೂರು ಪ್ರಾಥಮಿಕ ಆರೋಗ್ಯ ಕೇಂದ್ರ. ಬೆಂಗಳೂರು ಉತ್ತರ ತಾ॥. ಬೆಂಗಳೂರು ಜಿಲ್ಲೆ.

7. ಕೆರಗೋಡು ಪ್ರಾಥಮಿಕ ಆರೋಗ್ಯ ಕೇಂದ್ರ. ಮಂಡ್ಯ ತಾ||. ಮಂಡ್ಯ ಜಿಲ್ಲೆ.

8. ದೊಡ್ಡ ಅರಸಿನಕೆರೆ ಪ್ರಾಥಮಿಕ ಆರೋಗ್ಯ ಕೇಂದ್ರ. ಮದ್ದೂರು ತಾ||. ಮಂಡ್ಯ ಜಿಲ್ಲೆ.

4. **ಹಾಸಿಗೆಗಳ ಸಂಖ್ಯೆಯ ಹೆಚ್ಚಳಿಕೆ :-**

1. ಸಾರ್ವಜನಿಕ ಆಸ್ಪತ್ರೆ. ಕಾರ್ಕಳ. ದಕ್ಷಿಣ ಕನ್ನಡ ಜಿಲ್ಲೆ - 100 ರಿಂದ 200 ಹಾಸಿಗೆಗಳು.

2. ಸಾರ್ವಜನಿಕ ಆಸ್ಪತ್ರೆ. ಜೇವರ್ಗಿ. ಗುಲ್ಬರ್ಗಾ ಜಿಲ್ಲೆ - 30 ರಿಂದ 100 ಹಾಸಿಗೆಗಳು.

3. ಸಾರ್ವಜನಿಕ ಆಸ್ಪತ್ರೆ. ಯಾದಗೀರ್. ಗುಲ್ಬರ್ಗಾ ಜಿಲ್ಲೆ-30 ರಿಂದ 100 ಹಾಸಿಗೆಗಳು.

5. ಶಿವಮೊಗ್ಗ ಜಿಲ್ಲಾ ಆಸ್ಪತ್ರೆಯಲ್ಲಿ ಕ್ಯಾನ್ಸರ್ ಪತ್ತೆ ಕೇಂದ್ರ ಸ್ಥಾಪನೆ.

6. ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮದಲ್ಲಿ 40 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಅಭಿವೃದ್ಧಿ.

7. ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಎನ್.ಆರ್.ಪುರ. ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಶಿವಮೊಗ್ಗ ಜಿಲ್ಲೆಯ ಹರಮಘಟ್ಟ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ತಲಾ ಒಂದು ಸಮೀಕ್ಷೆ ಶಿಕ್ಷಣ ಮತ್ತು ಚಿಕಿತ್ಸಾ ಕೇಂದ್ರಗಳ ಸ್ಥಾಪನೆ.

8. ತುಮಕೂರು ಮತ್ತು ಧಾರವಾಡ ಜಿಲ್ಲಾ ಆಸ್ಪತ್ರೆಯ ಸ್ವಚ್ಛತೆ ಕಾರ್ಯವನ್ನು ಖಾಸಗಿಯವರಿಗೆ ವಹಿಸಿಕೊಡಲು ಮಂಜೂರಾತಿ ದೊರಕಿದೆ.

9. ತುಮಕೂರು ಜಿಲ್ಲಾ ಆಸ್ಪತ್ರೆಯ ಪ್ರಯೋಗಶಾಲೆಯ ಅಭಿವೃದ್ಧಿಗಾಗಿ 1.75 ಲಕ್ಷ ಮೌಲ್ಯದ ಉಪಕರಣಗಳನ್ನು ಖರೀದಿಸಲು ಸರ್ಕಾರ ಮಂಜೂರಾತಿ ನೀಡಿದೆ.

10. ಧಾರವಾಡ ಜಿಲ್ಲಾ ಆಸ್ಪತ್ರೆಗೆ 15 ಹೆಚ್ಚುವರಿ ಹುದ್ದೆಯನ್ನು ಸೃಜಿಸಲು ಸರ್ಕಾರ ಮಂಜೂರಾತಿ ನೀಡಿದೆ.

11. ಹಾಸನದ ಶ್ರೀ ಚಾಮರಾಜೇಂದ್ರ ಆಸ್ಪತ್ರೆಗೆ 1994-95ನೇ ಸಾಲಿನಲ್ಲಿ ರೂ.7.40 ಲಕ್ಷ ಮೌಲ್ಯದ ಉಪಕರಣಗಳನ್ನು ಖರೀದಿಸಲು ಸರ್ಕಾರ ಮಂಜೂರಾತಿ ನೀಡಿದೆ.

12. ಮಡಿಕೇರಿ. ತುಮಕೂರು. ರಾಯಚೂರು. ಮಂಡ್ಯ ಮತ್ತು ಚಿಕ್ಕಮಗಳೂರು ಜಿಲ್ಲಾ ಆಸ್ಪತ್ರೆಗಳಲ್ಲಿ ಮಾನಸಿಕ ಚಿಕಿತ್ಸಾ ಕೇಂದ್ರವನ್ನು ತೆರೆಯಲು ಸರ್ಕಾರ ಮಂಜೂರಾತಿ ನೀಡಿದೆ.

13. ತುಮಕೂರು ಮತ್ತು ಮಡಿಕೇರಿ ಜಿಲ್ಲಾ ಆಸ್ಪತ್ರೆಗಳಲ್ಲಿ ಹಾಗೂ ಕೆ.ಸಿ. ಸಾರ್ವಜನಿಕ ಆಸ್ಪತ್ರೆ. ಬೆಂಗಳೂರು. ಇಲ್ಲಿ ತೀವ್ರ ಹೃದ್ರೋಗ ಚಿಕಿತ್ಸಾ ಕೇಂದ್ರ ಸ್ಥಾಪಿಸಲು ಸರ್ಕಾರ ಮಂಜೂರಾತಿ ನೀಡಿದೆ.

14. ಬೆಂಗಳೂರಿನ ಕೆ. ಸಿ. ಸಾರ್ವಜನಿಕ ಆಸ್ಪತ್ರೆಯ ಪ್ರಯೋಗ ಶಾಲೆಯನ್ನು ಆಧುನೀಕರಿಸಲು 4 ಹೆಚ್ಚುವರಿ ಸಿಬ್ಬಂದಿಯನ್ನು ಮತ್ತು ಉಪಕರಣಗಳನ್ನು ಖರೀದಿಸಲು ಸರ್ಕಾರ ಮಂಜೂರಾತಿ ನೀಡಿದೆ.

15. ಬೆಂಗಳೂರಿನ ಜಯನಗರದ ಆಸ್ಪತ್ರೆಯ ಪ್ರಯೋಗ ಶಾಲೆಯನ್ನು ಆಧುನಿಕರಿಸಲು. 2 ಹೆಚ್ಚುವರಿ ಹುದ್ದೆಯನ್ನು ಸೃಜಿಸಲು ಮತ್ತು ಉಪಕರಣಗಳನ್ನು ಖರೀದಿಸಲು ಸರ್ಕಾರದ ಮಂಜೂರಾತಿ ದೊರಕಿದೆ.

16. ಶಿವಮೊಗ್ಗ ಮೆಗ್ಗಾನ್ ಆಸ್ಪತ್ರೆಯ 100 ಹೆಚ್ಚಿನ ಹಾಸಿಗೆಗಳನ್ನು ಸ್ಥಾಪಿಸಲು. 22 ಹೆಚ್ಚಿನ ಹುದ್ದೆಗಳನ್ನು ಸೃಜಿಸಲು ಮತ್ತು ಅವರ್ತ ಮತ್ತು ಅನಾವರ್ತ ವೆಚ್ಚವನ್ನು ಭರಿಸಲು ಸರ್ಕಾರ ಮಂಜೂರಾತಿ ನೀಡಿದೆ.

17. ಬೀದರ್ ಬಿಜಾಪುರ ಮತ್ತು ಚಿಕ್ಕಮಗಳೂರು ಆಸ್ಪತ್ರೆಗಳಲ್ಲಿ ನೀರಿನ ಸೌಕರ್ಯವನ್ನು ಅಭಿವೃದ್ಧಿಗೊಳಿಸಲು ಸರ್ಕಾರ ಮಂಜೂರಾತಿ ನೀಡಿದೆ.

## ವೈದ್ಯಕೀಯ ರಕ್ಷಣೆ (ನಗರ)

ಜಿಲ್ಲಾ ಆಸ್ಪತ್ರೆಗಳು ರೋಗಿಗಳ ಚಿಕಿತ್ಸಾ ಸೇವೆಯನ್ನೇ ಅಲ್ಲದೆ ರೋಗ ನಿರೋಧಕ ಹಾಗೂ ಆರೋಗ್ಯ ಉತ್ತೇಜಕ ಕಾರ್ಯಕ್ರಮವನ್ನು ಇತರ ಪ್ರಮುಖ ಆಸ್ಪತ್ರೆಗಳು. ಬೋಧಕ ಆಸ್ಪತ್ರೆಗಳು ಮತ್ತು ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗಳು ಮುಂತಾದ ವಿವಿಧ ಬಗೆಯ ಕೆಳಕಂಡ ಆಸ್ಪತ್ರೆಗಳ ಮೂಲಕ ಒದಗಿಸುತ್ತಿದೆ.

| | | ಸಂಸ್ಥೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ |
|---|---|---|---|
| 1) ಜಿಲ್ಲಾ ಆಸ್ಪತ್ರೆಗಳು | - | 16 | 5,788 |
| 2) ಬೋಧಕ ಆಸ್ಪತ್ರೆಗಳು | - | 9 | 5,907 |
| 3) ದೊಡ್ಡ ಆಸ್ಪತ್ರೆಗಳು | - | 8 | 1,521 |
| 4) ವಿಶೇಷ ಆಸ್ಪತ್ರೆಗಳು | - | 16 | 3,330 |
| 5) ಸಾರ್ವಜನಿಕ ಆಸ್ಪತ್ರೆಗಳು : | | | |
| ಹೆರಿಗೆ ಆಸ್ಪತ್ರೆಗಳು | - | 127 | 6,361 |
| ಒಟ್ಟು | - | 176 | 22,907 |

ಪ್ರತಿ ಜಿಲ್ಲಾ ಆಸ್ಪತ್ರೆಯು ಕೆಳಕಂಡ ವಿಶೇಷ ಸೇವಾ ಸೌಲಭ್ಯಗಳನ್ನು ಹೊಂದಿರುತ್ತದೆ.

1) ಕಾಯ ಚಿಕಿತ್ಸೆ
2) ಶಸ್ತ್ರಚಿಕಿತ್ಸೆ
3) ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ
4) ಮಕ್ಕಳ ಚಿಕಿತ್ಸೆ
5) ನೇತ್ರ ಚಿಕಿತ್ಸೆ
6) ಅಸ್ಥಿ ಚಿಕಿತ್ಸೆ
7) ಕಿವಿ, ಮೂಗು ಮತ್ತು ಗಂಟಲು ಚಿಕಿತ್ಸೆ
8) ಚರ್ಮ ಮತ್ತು ಗುಹ್ಯ ರೋಗಗಳ ಚಿಕಿತ್ಸೆ
9) ರೋಗ ವಿಧಾನ ಶಾಸ್ತ್ರ ಮತ್ತು ಏಕಾಣುಜೀವಿ ಶಾಸ್ತ್ರ
10) ಕ್ಷ - ಕಿರಣ
11) ಅರಿವಳಿಕೆ
12) ದಂತ ಚಿಕಿತ್ಸೆ

ಜಿಲ್ಲಾ ಆಸ್ಪತ್ರೆಗಳಲ್ಲಿ ಇರುವ ವಿಶೇಷ ತಜ್ಞರ ಸೇವಾ ವಿಭಾಗಗಳು ಆಸ್ಪತ್ರೆಗಳಿಗೆ ನೇರವಾಗಿ ಬರುವ ಹಾಗೂ ಗ್ರಾಮಾಂತರ ಪ್ರದೇಶದ ಚಿಕ್ಕ ಆರೋಗ್ಯ ಸಂಸ್ಥೆಗಳಿಂದ ಮತ್ತು ಹಳ್ಳಿಗಾಡಿನ ಆರೋಗ್ಯ ಸಂಸ್ಥೆಗಳಿಂದ ಬರುವಂತಹ ರೋಗಿಗಳಿಗೂ ಸೇವಾ ಸೌಲಭ್ಯಗಳನ್ನು ಒದಗಿಸುತ್ತವೆ. ಜಿಲ್ಲಾ ಆಸ್ಪತ್ರೆಗಳು ಕೆಳ ಹಂತದ ಆರೋಗ್ಯ ಸಂಸ್ಥೆಗಳಿಗೆ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತಿವೆ.

ಶ್ರೀ ಚಾಮರಾಜೇಂದ್ರ ಜಿಲ್ಲಾ ಆಸ್ಪತ್ರೆ, ಹಾಸನ : ಮೆಗ್ಗಾನ್ ಜಿಲ್ಲಾ ಆಸ್ಪತ್ರೆ, ಶಿವಮೊಗ್ಗ ಶ್ರೀ ನರಸಿಂಹರಾಜ ಜಿಲ್ಲಾ ಆಸ್ಪತ್ರೆ, ಕೋಲಾರ ಮತ್ತು ಜಿಲ್ಲಾ ಆಸ್ಪತ್ರೆ, ಬಿಜಾಪುರ, ಇವುಗಳಲ್ಲಿ ಸುಟ್ಟ ಗಾಯ ಮತ್ತು ಆಕಸ್ಮಿಕ ವಿಭಾಗಗಳನ್ನು ಸ್ಥಾಪಿಸಲಾಗಿದೆ.

ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಉಡುಪಿ, ಕೋಲಾರ ಚಿನ್ನದ ಗಣಿ ಪ್ರದೇಶ ಮತ್ತು ಕೊಳ್ಳೇಗಾಲದಲ್ಲಿರುವ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಗುಹ್ಯರೋಗ ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ.

ರಾಯಚೂರು, ಚಿಕ್ಕಮಗಳೂರು, ಮಂಡ್ಯ, ತುಮಕೂರು, ಮಡಿಕೇರಿ, ಶಿವಮೊಗ್ಗ, ಹಾಸನ, ಚಿತ್ರದುರ್ಗ, ಬೀದರ್ ಮತ್ತು ಬಿಜಾಪುರ ಜಿಲ್ಲಾ ಆಸ್ಪತ್ರೆಗಳಲ್ಲಿ ಮಾನಸಿಕ ರೋಗ ಚಿಕಿತ್ಸಾಲಯಗಳನ್ನು ಮಂಜೂರು ಮಾಡಲಾಗಿದೆ.

ಶಿವಮೊಗ್ಗ, ಹಾಸನ, ತುಮಕೂರು, ಚಿತ್ರದುರ್ಗ, ಕೋಲಾರ, ಮಂಡ್ಯ ಮತ್ತು ಬಿಜಾಪುರಗಳಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಫಿಸಿಯೋಥೆರಪಿ ಚಿಕಿತ್ಸಾ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಎಲ್ಲಾ ಬೋಧಕ ಆಸ್ಪತ್ರೆಗಳಲ್ಲಿಯೂ ಫಿಸಿಯೋಥೆರಪಿ ಚಿಕಿತ್ಸಾ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಬೆಂಗಳೂರಿನಲ್ಲಿ ಇರುವ ಕೆ. ಸಿ. ಸಾರ್ವಜನಿಕ ಆಸ್ಪತ್ರೆಯಲ್ಲಿ ಮತ್ತು ಜಯನಗರದ ಸಾರ್ವಜನಿಕ ಆಸ್ಪತ್ರೆಯಲ್ಲಿಯೂ ಕೂಡ ಫಿಸಿಯೋಥೆರಪಿ ಚಿಕಿತ್ಸಾ ಘಟಕವು ಕಾರ್ಯನಿರ್ವಹಿಸುತ್ತಿರುತ್ತದೆ.

ತುರ್ತು ಮತ್ತು ಆಕಸ್ಮಿಕ ವಿಭಾಗಗಳು ದಿನವಿಡೀ ಕೆಲಸ ನಿರ್ವಹಿಸುತ್ತಿರುತ್ತವೆ.

ಆರ್ಥಿಕ ಸಂಪನ್ಮೂಲಕ್ಕೆ ಅನುಗುಣವಾಗಿ ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಎಲ್ಲಾ ದೊಡ್ಡ ಆಸ್ಪತ್ರೆಗಳಲ್ಲಿರುವ ರಕ್ತನಿಧಿ ಕೇಂದ್ರಗಳನ್ನು ಬಲಪಡಿಸಲಾಗುತ್ತಿದೆ. ಏಯ್ಡ್ಸ್ ಸ್ಕ್ರೀನಿಂಗ್‌ನ ಸೌಲಭ್ಯವನ್ನು ಎಲ್ಲಾ ರಕ್ತನಿಧಿಗಳಲ್ಲಿ ಹಂತ ಹಂತವಾಗಿ ಒದಗಿಸಲಾಗುತ್ತಿದೆ. ರೇಡಿಯಾಲಜಿ ಸೇವೆಯು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ, ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಲಭ್ಯವಿರುತ್ತದೆ.

ದಂತ ಚಿಕಿತ್ಸಾ ವಿಭಾಗವನ್ನು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ಥಾಪಿಸಲಾಗಿದೆ.

ಬೆಂಗಳೂರು, ಮೈಸೂರು ಮತ್ತು ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿರುವ ಸಾಂಕ್ರಾಮಿಕ ರೋಗ ಆಸ್ಪತ್ರೆಗಳು ವಿಶೇಷ ರೀತಿಯ ಆಸ್ಪತ್ರೆಗಳಾಗಿದ್ದು, ಅತಿಸಾರ, ಕರುಳುಬೇನೆ, ಗಂಟಲುಮಾರಿ, ಧನುರ್ವಾಯು, ನಾಯಿಕೆಮ್ಮು, ಹುಚ್ಚುನಾಯಿ ಕಡಿತ, ದಢಾರ, ಸಂಶಯಾಸ್ಪದ ಸೀತಾಳೆ ಸಿಡುಬು ರೋಗ ಮತ್ತು ಇತರ ಅಂಟು ಜಾಡ್ಯಗಳಂತಹ ಸಾಂಕ್ರಾಮಿಕ ರೋಗಗಳಿಗೆ ಮೀಸಲಾಗಿದೆ.

## ಗ್ರಾಮೀಣ ಆರೋಗ್ಯ ಕಾರ್ಯಕ್ರಮಗಳು

ಕನಿಷ್ಠ ಅವಶ್ಯಕತೆ ಕಾರ್ಯಕ್ರಮ (ಗ್ರಾಮೀಣ ಆರೋಗ್ಯ) ಅನುಷ್ಠಾನದ ಅಡಿಯಲ್ಲಿ ಭಾರತ ಸರ್ಕಾರದ ಮಾರ್ಗದರ್ಶನಗಳಿಗನುಗುಣವಾಗಿ ರಾಜ್ಯ ಸರ್ಕಾರವು ಮೂರು ಹಂತಗಳ ಅಂದರೆ ಉಪಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಸಮುದಾಯ ಆರೋಗ್ಯ ಕೇಂದ್ರ ಎಂಬ ಆರೋಗ್ಯ ಸಂಸ್ಥೆಗಳನ್ನು ಸ್ಥಾಪಿಸಲು ತೀರ್ಮಾನಿಸಿದೆ.

ಹಾಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಥಮಿಕ ಆರೋಗ್ಯ ಘಟಕಗಳನ್ನು ಹಂತ ಹಂತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೆ ಏರಿಸಲಾಗುತ್ತಿದೆ.

**1) ಸಮುದಾಯ ಆರೋಗ್ಯ ಕೇಂದ್ರ**

ಪ್ರತಿ ನಾಲ್ಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ : ಒಂದು ಲಕ್ಷ ಜನಸಂಖ್ಯೆಗೆ ಒಂದು

ಸಮುದಾಯ ಆರೋಗ್ಯ ಕೇಂದ್ರವನ್ನು ಸ್ಥಾಪಿಸುವುದು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರದ ಉದ್ದೇಶವಾಗಿರುತ್ತದೆ. ರಾಜ್ಯದ ಎಲ್ಲಾ ತಾಲ್ಲೂಕು ಮಟ್ಟದ ಆರೋಗ್ಯ ಸಂಸ್ಥೆಗಳನ್ನು 30 ಹಾಸಿಗೆಗಳ ಆಸ್ಪತ್ರೆಗಳನ್ನಾಗಿ ಮತ್ತು ಉಪವಿಭಾಗ ಕೇಂದ್ರ ಸ್ಥಾನದ ತಾಲ್ಲೂಕುಗಳನ್ನು 50 ಹಾಸಿಗೆಗಳ ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಸರ್ಕಾರದ ಕಾರ್ಯನೀತಿಯಾಗಿರುತ್ತದೆ. ಈ ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನತೆಗೆ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತನೆ.

30 ಹಾಸಿಗೆಗಳ ಆಸ್ಪತ್ರೆಗಳು ಕೆಳಕಂಡ ಕನಿಷ್ಠ ನಾಲ್ಕು ವಿಶೇಷ ಚಿಕಿತ್ಸಾ ಸೇವಾ ಸೌಲಭ್ಯಗಳನ್ನು ಹೊಂದಿರುತ್ತವೆ.

1) ಸಾಮಾನ್ಯ ವೈದ್ಯ ಚಿಕಿತ್ಸೆ

2) ಸಾಮಾನ್ಯ ಶಸ್ತ್ರ ಚಿಕಿತ್ಸೆ

3) ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ

4) ದಂತ ಶಸ್ತ್ರ ಚಿಕಿತ್ಸೆ

50 ಹಾಸಿಗೆಯುಳ್ಳ ಆಸ್ಪತ್ರೆಗಳಲ್ಲಿ ಮೇಲ್ಕಂಡ ನಾಲ್ಕು ವಿಶೇಷ ಚಿಕಿತ್ಸಾ ಸೇವಾ ಸೌಲಭ್ಯಗಳ ಜೊತೆಗೆ ಕಿವಿ. ಮೂಗು. ಗಂಟಲು ಚಿಕಿತ್ಸೆ ಮತ್ತು ಮಕ್ಕಳ ಚಿಕಿತ್ಸಾ ಸೇವಾ ಸೌಲಭ್ಯಗಳಿರುತ್ತವೆ.

**2) ಪ್ರಾಥಮಿಕ ಆರೋಗ್ಯ ಕೇಂದ್ರ :**

ಪ್ರಾಥಮಿಕ ಆರೋಗ್ಯ ಕೇಂದ್ರಗಳು ರೋಗ ನಿರೋಧಕ. ಮುಂಜಾಗರೂಕತೆ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಇವುಗಳಲ್ಲದೆ. ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕೂಡ ಒದಗಿಸುತ್ತವೆ.

ಭಾರತ ಸರ್ಕಾರದ ಮಾರ್ಗಸೂಚಿಗನುಗುಣವಾಗಿ ಕ್ರಿ.ಶ. 2000 ದ ವೇಳೆಗೆ ಕರ್ನಾಟಕ ದಲ್ಲಿ ಮೈದಾನ ಪ್ರದೇಶಗಳಲ್ಲಿ ಪ್ರತಿ ಮೂವತ್ತು ಸಾವಿರ ಜನ ಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗದವರು ವಾಸಿಸುವ ಪ್ರದೇಶಗಳಲ್ಲಿ ಪ್ರತಿ ಇಪ್ಪತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಇರುತ್ತದೆ. ಇದರಿಂದ ಗ್ರಾಮೀಣ ಪ್ರದೇಶದ ಜನರಿಗೆ ಅವರ ಗ್ರಾಮಗಳಿಗೆ ಸಮೀಪದಲ್ಲಿ ಆರೋಗ್ಯ ಸೇವೆಗಳನ್ನು ಒದಗಿಸಲು ಅನುಕೂಲವಾಗುತ್ತದೆ. ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೂ 50.000 ರೂಪಾಯಿ ಬೆಲೆಬಾಳುವ ಔಷಧವನ್ನು ಒದಗಿಸಲಾಗುತ್ತದೆ.

**3) ಪ್ರಾಥಮಿಕ ಆರೋಗ್ಯ ಘಟಕ :**

ಕರ್ನಾಟಕ ರಾಜ್ಯದಲ್ಲಿ ಪ್ರಾಥಮಿಕ ಆರೋಗ್ಯ ಘಟಕಗಳೆಂಬ ಆರೋಗ್ಯ ಸಂಸ್ಥೆಗಳಿದ್ದು ಈ ಘಟಕಗಳು ರೋಗ ಮುಂಜಾಗರೂಕತೆ. ರೋಗ ನಿರೋಧಕ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಈ ಸಂಸ್ಥೆಗಳನ್ನು ಹಂತ ಹಂತವಾಗಿ ಪ್ರಾಥಮಿಕ ಆರೋಗ್ಯ

ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುತ್ತದೆ ಮತ್ತು ಕನಿಷ್ಠ ಅವಶ್ಯಕತೆಗಳನ್ನು ಒದಗಿಸಲಾಗುತ್ತದೆ.

**4) ಆರೋಗ್ಯ ಉಪ ಕೇಂದ್ರಗಳು :**

ಮೈದಾನ ಪ್ರದೇಶಗಳಲ್ಲಿ ಪ್ರತಿ ಐದು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರ ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗ ವಾಸಿಸುವ ಪ್ರದೇಶದಲ್ಲಿ ಪ್ರತಿ ಮೂರು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪ ಕೇಂದ್ರವನ್ನು ಹೊಂದುವ ಗುರಿಯು ರಾಜ್ಯ ಮತ್ತು ಭಾರತ ಸರ್ಕಾರದ ಉದ್ದೇಶವಾಗಿರುತ್ತದೆ.

ಪ್ರತಿ ಆರೋಗ್ಯ ಉಪ ಕೇಂದ್ರಗಳಲ್ಲಿ ಒಬ್ಬ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಒಬ್ಬ ಪುರುಷ ಆರೋಗ್ಯ ಸಹಾಯಕರುಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ ಮತ್ತು ಪ್ರತಿ ಉಪ ಕೇಂದ್ರಕ್ಕೂ ಐದು ಸಾವಿರ ರೂಪಾಯಿಗಳ ಬೆಲೆ ಬಾಳುವ ಔಷಧಿಗಳನ್ನು ಒದಗಿಸಲಾಗುತ್ತದೆ.

ಗ್ರಾಮೀಣ ಆರೋಗ್ಯ ಸೇವೆಗಳನ್ನು ವಿವಿಧ ಮಾದರಿಯ ಸಂಸ್ಥೆಗಳ ಮೂಲಕ ಒದಗಿಸಲಾಗುತ್ತದೆ. ವಿವರಗಳು ಕೆಳಕಂಡಂತಿರುತ್ತವೆ.

| ಕ್ರ. ಸಂ. | ಸಂಸ್ಥೆಯ ವಿವರಗಳು | 1992-93 | 1993-94 | 1994-95 ಡಿಸೆಂಬರ್ 94ರ ಅಂತ್ಯದವರೆಗೆ |
|---|---|---|---|---|
| 1) | ಸಮುದಾಯ ಆರೋಗ್ಯ ಕೇಂದ್ರಗಳು | 198 | 213 | 224 |
| 2) | ಪ್ರಾಥಮಿಕ ಆರೋಗ್ಯ ಕೇಂದ್ರಗಳು | 1297 | 1357 | 1390 |
| 3) | ಪ್ರಾಥಮಿಕ ಆರೋಗ್ಯ ಘಟಕಗಳು | 622 | 613 | 613 |
| 4) | ಉಪ ಕೇಂದ್ರಗಳು | 7793 | 7793 | 7993 |
| 5) | ಹಾಸಿಗೆಗಳು | 11899 | 12631 | 13110 |

F-2

# ಆಸ್ಪತ್ರೆ ಫಾರ್ಮಸಿ ಕಾರ್ಯಕ್ರಮ

**ಪರಿಚಯ :**

'ಆಸ್ಪತ್ರೆ ಫಾರ್ಮಸಿ' ಕಾರ್ಯಕ್ರಮವು ರಾಜ್ಯವಲಯದ ಕಾರ್ಯಕ್ರಮವಾಗಿದೆ.

**ಉದ್ದೇಶಗಳು :**

(1) ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ ರೋಗಿಗಳ ಉಪಯೋಗಕ್ಕಾಗಿ ಜೀವ ಉಳಿಸುವ ಅಂತರ್ನಾಳ ಔಷಧಿಗಳಾದ ಗ್ಲೂಕೋಸ್, ಗ್ಲೂಕೋಸ್ ಸಲೈನ್. ನಾರ್ಮಲ್ ಸಲೈನ್ ಇತ್ಯಾದಿಗಳನ್ನು ತಯಾರಿಸುವುದು.

(2) ತಾಂತ್ರಿಕವಾಗಿ ಉತ್ತಮ ಮಟ್ಟದ ಔಷಧ ಸಂಸ್ಕರಣೆ ಮತ್ತು ವಿತರಣ ವಿಭಾಗ ಸೆಂಟ್ರಲ್ ಸ್ಟರೈಲ್ ಸಂಸ್ಥೆ ವಿಭಾಗ ಮತ್ತು ದಾಸ್ತಾನು ಪದ್ಧತಿಗಳನ್ನು ಜೋಡಿಸುವುದು.

(3) ಆಸ್ಪತ್ರೆ ಸಿಬ್ಬಂದಿಗಳ ಮತ್ತು ರೋಗಿಗಳ ಉಪಯೋಗಕ್ಕಾಗಿ ಒಂದು 'ಔಷದ ಮಾಹಿತಿ ಸೇವೆ'ಯನ್ನು ಸ್ಥಾಪಿಸುವುದು.

**ರಾಜ್ಯದಲ್ಲಿ ಮಂಜೂರಾಗಿರುವ ಆಸ್ಪತ್ರೆ ಫಾರ್ಮಸಿ ಘಟಕಗಳ ವಿವರ ಕೆಳಕಂಡಂತಿವೆ**

| ಕ್ರಮ ಸಂಖ್ಯೆ | ಆಸ್ಪತ್ರೆ ಫಾರ್ಮಸಿ ಘಟಕಗಳ ಹೆಸರು | ಯೋಜನೇತರ ಅಥವಾ ಯೋಜನೆ | ಷರಾ |
|---|---|---|---|
| 1 | 2 | 3 | 4 |
| 1. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು. | ಯೋಜನೇತರ | |
| 2. | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, | | |
| 3. | ಕೆ. ಆರ್. ಆಸ್ಪತ್ರೆ, ಮೈಸೂರು. | | |
| 4. | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು. | | |
| 5. | ಸಿ. ಜಿ. ಆಸ್ಪತ್ರೆ, ದಾವಣಗೆರೆ. | | |
| 6. | ಕೆ. ಎಂ. ಸಿ. ಆಸ್ಪತ್ರೆ, ಹುಬ್ಬಳ್ಳಿ. | | |
| 7. | ಜಿಲ್ಲಾ ಆಸ್ಪತ್ರೆ, ಬೆಳಗಾಂ. | | |
| 8. | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | | |
| 9. | ವೈದ್ಯಕೀಯ ಆಸ್ಪತ್ರೆ, ಬಳ್ಳಾರಿ. | | |

| ಕ್ರಮ ಸಂಖ್ಯೆ | ಆಸ್ಪತ್ರೆ ಫಾರ್ಮಸಿ ಘಟಕಗಳ ಹೆಸರು | ಯೋಜನೇತರ ಅಥವಾ ಯೋಜನೆ | ಷರಾ |
|---|---|---|---|
| 1 | 2 | 3 | 4 |
| 10. | ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ. | | ಹೆಚ್ಚುವರಿ ಸಿಬ್ಬಂದಿ ಮತ್ತು ಉಪಕರಣಗಳನ್ನು ಮಂಜೂರು ಮಾಡಬೇಕಾಗಿದೆ. |
| 11. | ಜಿಲ್ಲಾ ಆಸ್ಪತ್ರೆ, ಮಂಡ್ಯ. | | |
| 12. | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ | | |
| 13. | ಜಿಲ್ಲಾ ಆಸ್ಪತ್ರೆ, ಬೀದರ್. | | |
| 14. | ಜಿಲ್ಲಾ ಆಸ್ಪತ್ರೆ, ಬಿಜಾಪುರ | | |
| 15. | ಎಸ್. ಎನ್. ಆರ್. ಆಸ್ಪತ್ರೆ, ಕೋಲಾರ. | ಯೋಜನೆ | ಕಟ್ಟಡ ಸಿದ್ಧವಾಗಿದೆ. ತಯಾರಿಕೆ ಪ್ರಾರಂಭಿಸಲು ಉಪಕರಣಗಳನ್ನು ಸರಬರಾಜು ಮಾಡಬೇಕಾಗಿದೆ. |
| 16. | ಶ್ರೀ ಚಾಮರಾಜೇಂದ್ರ ಆಸ್ಪತ್ರೆ, | ” | ಕಟ್ಟಡ ಸಿದ್ಧವಾಗಿದೆ. ತಯಾರಿಕೆ ಪ್ರಾರಂಭಿಸಲು ಉಪಕರಣಗಳನ್ನು ಮತ್ತು ಸಿಬ್ಬಂದಿ ಮಂಜೂರು ಮಾಡಬೇಕಾಗಿದೆ. ಆದರೆ ಸರ್ಕಾರವು ಇದನ್ನು ಕೈಬಿಟ್ಟಿದೆ. |
| 17. | ಜಿಲ್ಲಾ ಆಸ್ಪತ್ರೆ, ರಾಯಚೂರು. | ” | ಕಟ್ಟಡ ಕಟ್ಟಲು ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ. ಕಟ್ಟಡ ಕಟ್ಟುವ ಕಾರ್ಯಪ್ರಗತಿಯಲ್ಲಿದೆ. |
| 18. | ಜಿಲ್ಲಾ ಆಸ್ಪತ್ರೆ, ತುಮಕೂರು. | | |
| 19. | ಜಿಲ್ಲಾ ಆಸ್ಪತ್ರೆ, ಕಾರವಾರ | ” | ಕಟ್ಟಡ ಕಟ್ಟಲು ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ದೊರಕಿದೆ. ಆದರೆ ಇದನ್ನು ಕೈಬಿಟ್ಟಿದೆ. |

**ಪರವಾನಗಿ :**

ಹಾಲಿ ಕಾರ್ಯಗತವಾಗಿರುವ ಎಲ್ಲಾ ಘಟಕಗಳಿಗೂ ಪರವಾನಗಿಯನ್ನು ಪಡೆಯಲಾಗಿದೆ.

**ಯಂತ್ರೋಪಕರಣಗಳು :**

ಈ ಎಲ್ಲಾ ಘಟಕಗಳಲ್ಲಿಯೂ ತಹಲ್ಬರ್‌ಗೆ ತಂದ ತಾಂತ್ರಿಕತೆ ಮತ್ತು ಯಂತ್ರೋಪಕರಣಗಳನ್ನು ಅಳವಡಿಸಲಾಗಿದೆ. ಇದರಿಂಧ್ ಇನ್ನೂ ಹೆಚ್ಚಿನ ಉತ್ಪಾದನೆಯನ್ನು ಮಾಡಲು ಸಹಾಯವಾಗುತ್ತದೆ.

**ತಯಾರಿಕೆ :**

ಹಾಲಿ ಕಾರ್ಯನಿರ್ವಹಿಸುತ್ತಿರುವ ಫಾರ್ಮಸಿ ಘಟಕಗಳಲ್ಲಿ ಈ ಕೆಳಕಂಡ ಔಷಧಿಗಳನ್ನು ತಯಾರಿಸಲಾಗುತ್ತಿದೆ.

(1) ಟೆಕ್ಸ್‌ಟ್ರೋಸ್ ಇಂಜೆಕ್ಷನ್
(2) ಡೆಕ್ಸ್‌ಟ್ರೋಜ್ ಸಲೈನ್ ಇಂಜೆಕ್ಷನ್
(3) ನಾರ್ಮಲ್ ಸಲೈನ್ ಇಂಜೆಕ್ಷನ್
(4) ಮ್ಯಾನಿಟಾಲ್ ಇಂಜೆಕ್ಷನ್
(5) ವಾಟರ್ ಫಾರ್ ಇಂಜೆಕ್ಷನ್
(6) ಎ. ಸಿ.ಡಿ. ಸಲ್ಯೂಷನ್ ಫಾರ ಬ್ಲಡ್‌ಬ್ಯಾಂಕ್ಸ್.

1994-95ನೇ ಸಾಲಿನಲ್ಲಿ ಡಿಸೆಂಬರ್ 94ರ ಅಂತ್ಯದವರೆಗೆ 7.20 ಲಕ್ಷ ಐ.ವಿ. ದ್ರಾವಣ ಶೀಷೆಗಳನ್ನು ತಯಾರಿಸಲಾಗಿದೆ.

## ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮ

**1. ಪೀಠಿಕೆ :**

ಕರ್ನಾಟಕ ರಾಜ್ಯದ ಜನಸಂಖ್ಯೆಯು ಭಾರತದ ಜನಸಂಖ್ಯೆಯ ಬೆಳವಣಿಗೆಯಷ್ಟೇ ವೇಗವಾಗಿ ಬೆಳೆಯುತ್ತಿದೆ. ಯೋಜನಾ ಅಭಿವೃದ್ಧಿ ಕಾರ್ಯಕ್ರಮಗಳು ಸಾಕಷ್ಟು ಕಾರ್ಯಗತವಾಗಿದ್ದರೂ ಸಹ ಅವುಗಳ ಪ್ರಯೋಜನ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಾಗುತ್ತಿಲ್ಲ. ಇದನ್ನು ಮನಗಂಡು ಸರ್ಕಾರವು ಪಂಚವಾರ್ಷಿಕ ಯೋಜನೆಗಳ ಪ್ರಾರಂಭದಿಂದಲೂ ಜನಸಂಖ್ಯಾ ನಿಯಂತ್ರಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಿದೆ. ಈ ಸಂಬಂಧವಾಗಿ ಕುಟುಂಬ ಕಲ್ಯಾಣ ಕಾರ್ಯಕ್ರಮವು ರಾಷ್ಟ್ರಮಟ್ಟದಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದು. 1952 ನೇ ಇಸವಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಅದರೂ 1966-67ನೇ ಸಾಲಿನಿಂದ ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುತ್ತಿರುವ ಪ್ರಯುಕ್ತ ರಾಜ್ಯವು ರಾಷ್ಟ್ರಮಟ್ಟದಲ್ಲಿ ಒಂದು ಹೆಚ್ಚಿನ ಸ್ಥಾನ ಪಡೆದಿದ್ದು 1981ರಲ್ಲಿದ್ದು ಶೇ. 2.6ರ ಜನಸಂಖ್ಯಾ ಬೆಳವಣಿಗೆ ದರವು 1991ರಲ್ಲಿ ಶೇ. 1.9ಕ್ಕೆ ಇಳಿಯಿತು.

ರಾಜ್ಯವು ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕೆ ಹೆಚ್ಚಿನ ಒತ್ತು ಕೊಡುತ್ತಿರುವ ಕಾರಣ 1930ರಲ್ಲಿಯೇ ಮೈಸೂರು ಸಂಸ್ಥಾನದ ಅಂದಿನ ಮಹಾರಾಜರಿಂದ ಮೈಸೂರಿನ ಚೆಲುವಾಂಬ ಆಸ್ಪತ್ರೆ ಮತ್ತು ಬೆಂಗಳೂರಿನ ವಾಣಿವಿಲಾಸ ಆಸ್ಪತ್ರೆಯಲ್ಲಿ ಒಂದೊಂದು ಜನಸಂಖ್ಯಾ ನಿಯಂತ್ರಣ ಚಿಕಿತ್ಸಾಲಯಗಳು ತೆರೆಯಲ್ಪಟ್ಟಿತು.

**2. ಕಾರ್ಯಕ್ರಮ :**

ಜನಸಂಖ್ಯಾ ಸಮಸ್ಯೆಗಳನ್ನು ಮನಗಂಡು ಭಾರತ ಸರ್ಕಾರವು ಜನಸಂಖ್ಯಾ ಬೆಳವಣಿಗೆಗೆ ಕಡಿವಾಣ ಹಾಕಲು ಶೇ. ನೂರರಷ್ಟು ಕೇಂದ್ರೀಯ ಅನುದಾನ ಸಹಾಯದ ಮೂಲಕ ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು 1952ರಲ್ಲಿ ಹಮ್ಮಿಕೊಂಡಿತು. ಈ ಕಾರ್ಯಕ್ರಮವನ್ನು 1966 ರಿಂದೀಚೆಗೆ ಪರಿಣಾಮಕಾರಿಯಾಗಿ ಜಾರಿಗೊಳಿಸಲು ಈ ಕೆಳಕಂಡ ಧ್ಯೇಯೋದ್ದೇಶಗಳೊಂದಿಗೆ ಪ್ರಾರಂಭಿಸಲಾಯಿತು.

1. 2000 ಇಸವಿಯ ವೇಳೆಗೆ ಜನನ ಪ್ರಮಾಣವನ್ನು ಪ್ರತಿ ಸಾವಿರ ಜನಸಂಖ್ಯೆಗೆ 21ಕ್ಕೆ ಇಳಿಸುವುದು.
2. 2000 ಇಸವಿಯ ವೇಳೆಗೆ ಮರಣ ಪ್ರಮಾಣವನ್ನು ಪ್ರತಿ ಸಾವಿರ ಜನಸಂಖ್ಯೆಗೆ 9 ಕ್ಕೆ ಇಳಿಸುವುದು.
3. ಶಿಶು ಮರಣ ಪ್ರಮಾಣವನ್ನು ಪ್ರತಿ ಸಾವಿರ ಜೀವಂತ ಜನನಕ್ಕೆ 60 ಕ್ಕಿಂತ ಕಡಿಮೆಗೊಳಿಸುವುದು.
4. ನಿವ್ವಳ ಜನನ ಪ್ರಮಾಣ ದರವನ್ನು 1ಕ್ಕೆ ಇಳಿಸುವುದು.
5. ಜನಸಂಖ್ಯಾ ಬೆಳವಣಿಗೆ ದರವನ್ನು ಶೇಕಡಾ 1.2ಕ್ಕೆ ಇಳಿಸುವುದು.
6. ಅರ್ಹ ದಂಪತಿಗಳ ರಕ್ಷಣಾ ದರವನ್ನು 60 ಕ್ಕಿಂತ ಜಾಸ್ತಿ ಮಾಡುವುದು, ಮತ್ತು
7. ಜನನ ಕಾಲದಲ್ಲಿ ನಿರೀಕ್ಷಿತ ಆಯ: ಪ್ರಮಾಣವನ್ನು 64 ವರ್ಷಕ್ಕಿಂತ ಅಧಿಕಗೊಳಿಸುವುದು.
8. **ಲಸಿಕಾ ಕಾರ್ಯಕ್ರಮ :**

| | | |
|---|---|---|
| ಅ) ಟಿ. ಟಿ. (ಗರ್ಭಿಣಿ ಸ್ತ್ರೀ) | - | ಶೇ. 100 ರಷ್ಟು. |
| ಆ) ಡಿ.ಪಿ.ಟಿ. (ಶಿಶುಗಳು) | - | ಶೇ. 100 ರಷ್ಟು |
| ಇ) ಪೋಲಿಯೋ | - | ಶೇ. 100 ರಷ್ಟು |
| ಈ) ಬಿ. ಸಿ. ಜಿ. | - | ಶೇ. 100 ರಷ್ಟು |
| ಉ) ದಢಾರ | - | ಶೇ. 100 ರಷ್ಟು |

3. ಕುಟುಂಬ ಕಲ್ಯಾಣ ಕಾರ್ಯಕ್ರಮ ಪ್ರಾರಂಭವಾದಂದಿನಿಂದ ಆದ ಪರಿಣಾಮ :

ಈ ಕಾರ್ಯಕ್ರಮವನ್ನು ಜಾರಿಗೊಳಿಸದಿದ್ದರೆ 1991ರ ಜನಗಣತಿಯ ಪ್ರಕಾರ ಈಗಿರುವ ರಾಜ್ಯದ 4.48 ಕೋಟಿ ಜನಸಂಖ್ಯೆಯ ಬದಲಾಗಿ 5.85 ಕೋಟಿಯಾಗುತ್ತಿದ್ದಿತು. ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಿದ್ದರಿಂದ ರಾಜ್ಯದಲ್ಲಿ ಸುಮಾರು 1.37 ಕೋಟಿಯನ್ನು ಜನಸಂಖ್ಯೆಯನ್ನು ತಡೆಗಟ್ಟಿದಂತಾಗಿದೆ. ಈ ಕಾರ್ಯಕ್ರಮದಡಿಯಲ್ಲಿ ಸಾಧಿಸಲಾದ ಮುಖ್ಯ ಸಾಧನೆಗಳನ್ನು ಈ ಕೆಳಗೆ ಕೊಡಲಾಗಿದೆ.

1) 1961ರಲ್ಲಿ 41.0 ರಷ್ಟಿದ್ದ ಜನನ ಪ್ರಮಾಣವು 1993 ರಲ್ಲಿ 25.5ಕ್ಕೆ ಇಳಿದಿದೆ.

2) 1961ರಲ್ಲಿ 22.2 ರಷ್ಟಿದ್ದ ಮರಣ ಪ್ರಮಾಣವು 1993ರಲ್ಲಿ 8ಕ್ಕೆ ಇಳಿದಿದೆ.

3) 1971ರಲ್ಲಿ 95 ಇದ್ದ ಶಿಶು ಮರಣ ಪ್ರಮಾಣವು 1993ರಲ್ಲಿ 67ಕ್ಕೆ ಇಳಿದಿದೆ.

4) 1971ರಲ್ಲಿ ಗ್ರಾಮೀಣ ಪ್ರದೇಶದಲ್ಲಿದ್ದ 154.9 ಹಾಗೂ ನಗರ ಪ್ರದೇಶದಲ್ಲಿದ್ದ 124.9ರ ಸಾಮಾನ್ಯ ಫಲವತ್ತತೆಯ ದರವು 1987ರಲ್ಲಿ ಕ್ರಮವಾಗಿ 122.9 ಮತ್ತು 102.3ಕ್ಕೆ ಇಳಿಯಿತು.

5) 1972ರಲ್ಲಿ 4.5 ರಷ್ಟಿದ್ದ ಒಟ್ಟು ಫಲವತ್ತತೆಯು 1992ರಲ್ಲಿ 3.1ಕ್ಕೆ ಇಳಿಯಿತು.

6) 1961ರಲ್ಲಿ 4.5 ರಷ್ಟಿದ್ದ ಜನನ ಕಾಲದಲ್ಲಿನ ನಿರೀಕ್ಷಿತ ಆಯು: ಪ್ರಮಾಣವು ಪುರುಷರಿಗೆ 64.15 (ಅಂದಾಜು) ಹಾಗೂ ಸ್ತ್ರೀಯರಿಗೆ 65.30ಕ್ಕೆ ಏರಿತು.

7) 1961ರಲ್ಲಿ ಸ್ತ್ರೀಯರ ವಿವಾಹದ ಸರಾಸರಿ ವಯಸ್ಸು 16.4 ಇದ್ದದ್ದು 1981 ರಲ್ಲಿ 19.21ಕ್ಕೆ ಏರಿತು ಹಾಗೂ 1961ರಲ್ಲಿ ಪುರುಷರ ವಿವಾಹದ ಸರಾಸರಿ ವಯಸ್ಸು 24.17 ಇದ್ದದ್ದು 1981ರಲ್ಲಿ 25.86ಕ್ಕೆ ಏರಿತು.

8) 1970 ರಲ್ಲಿ 58.8 ರಷ್ಟಿದ್ದ ನವಜಾತ ಶಿಶು ಮರಣ ಪ್ರಮಾಣ ದರವು 1986ರಲ್ಲಿ 54.4ಕ್ಕೆ ಇಳಿಯಿತು.

9) 1970ರಲ್ಲಿದ್ದ 0.4 ವರ್ಷದೊಳಗಿನ ಮಕ್ಕಳ ಅಂದಾಜು ಮರಣ ಪ್ರಮಾಣ ದರವು 37.5 ಇದ್ದದ್ದು 1986ರಲ್ಲಿ 24.5ಕ್ಕೆ ಇಳಿಯಿತು.

10) 1981ರಲ್ಲಿದ್ದ 23.7ರಷ್ಟು ಅರ್ಹ ದಂಪತಿಗಳ ರಕ್ಷಣಾ ದರವು 1994ರಲ್ಲಿ 52.4 ಕ್ಕೆ ಏರಿತು. (ಜಿಲ್ಲಾವಾರು ಅರ್ಹದಂಪತಿಗಳ ರಕ್ಷಣಾ ದರವನ್ನು ಅನುಬಂಧ III ರಲ್ಲಿ ನಮೂದಿಸಲಾಗಿದೆ.)

11) 1981 ರಲ್ಲಿದ್ದ ಜನಸಂಖ್ಯೆಯ ಬೆಳವಣಿಗೆ ದರ ಶೇಕಡಾ 2.6 ರಷ್ಟಿದ್ದದ್ದು 1991 ರಲ್ಲಿ ಶೇಕಡಾ 1.9ಕ್ಕೆ ಇಳಿಯಿತು.

12) ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಅಂದಾಜಿನ ಪ್ರಕಾರ ಸುಮಾರು 1.37 ಕೋಟಿಯಷ್ಟು ಜನನಗಳನ್ನು ತಡೆಗಟ್ಟಿದಂತಾಗಿದೆ.

13) 1994-95 ರಲ್ಲಿ ಲಸಿಕಾ ಕಾರ್ಯಕ್ರಮದಡಿಯಲ್ಲಿ ಸಾಧಿಸಲಾದ ಪ್ರಗತಿಯನ್ನು ಈ ಕೆಳಗೆ ಕೊಡಲಾಗಿದೆ.

ಅ) ಡಿಪಿಟಿ ಶೇಕಡ 90.9 ಆ) ಪೋಲಿಯೋ ಶೇಕಡ 91.1

ಇ) ಬಿಸಿಜಿ ಶೇಕಡ 99.2 ಈ) ದಡಾರ ಶೇಕಡ 83.4

ಉ) ಟಿ. ಟಿ. ಗರ್ಭಿಣಿ ಸ್ತ್ರೀ ಶೇಕಡ 92.6

14) 1993-94ರಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಶಸ್ತ್ರಚಿಕಿತ್ಸೆ ಮತ್ತು ವಂಕಿ ಅಳವಡಿಕೆ ವಿಧಾನಗಳನ್ನು ಅನುಸರಿಸಿದ ಫಲಾನುಭವಿಗಳು ಹೊಂದಿರುವ ಸರಾಸರಿ ಜೀವಂತ ಮಕ್ಕಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

| | | |
|---|---|---|
| ವ್ಯಾಸ್‌ಕ್ಟಮಿ | - | 2.8 |
| ಟ್ಯುಬೆಕ್ಟಮಿ | - | 2.7 |
| ವಂಕಿ ಅಳವಡಿಕೆ | - | 1.8 |

15) 1993-94ನೇ ಸಾಲಿನಲ್ಲಿ ವಿವಿಧ ವಿಧಾನಗಳನ್ನು ಅನುಸರಿಸಿದವರ ಸರಾಸರಿ ವಯಸ್ಸು ಈ ಕೆಳಗಿನಂತಿದೆ.

| | | |
|---|---|---|
| ವ್ಯಾಸ್‌ಕ್ಟಮಿ | - | 32.5 |
| ಟ್ಯುಬೆಕ್ಟಮಿ | - | 27.0 |
| ವಂಕಿ ಅಳವಡಿಕೆ | - | 24.7 |

## 4. ಕುಟುಂಬ ಕಲ್ಯಾಣ ಕಾರ್ಯಕ್ರಮದ ಅನುಷ್ಠಾನದಲ್ಲಿ ಅನುಸರಿಸಲಾದ ವಿಧಾನಗಳು :

1) ಸಮೂಹ ಮಾಧ್ಯಮ ಹಾಗೂ ಐ. ಇ. ಸಿ. ಚಟುವಟಿಕೆಗಳ ಮೂಲಕ ಅರ್ಹ ದಂಪತಿಗಳನ್ನು ಕುಟುಂಬ ಕಲ್ಯಾಣ ವಿಧಾನಗಳನ್ನು ಅನುಸರಿಸುವಂತೆ ಮನ ಒಲಿಸುವುದು.

ಅ. ಸಣ್ಣ ಕುಟುಂಬ ತತ್ವ

ಆ. ತಡವಾಗಿ ವಿವಾಹವಾಗುವುದರ ಪ್ರಯೋಜನ

ಇ. ಅಂತರದ ವಿಧಾನಗಳು

ಈ. ಶಿಶು ಉಳಿಯುವಿಕೆ ಮತ್ತು ಸುರಕ್ಷಿತ ತಾಯ್ತನ

ಉ. ಆರು ಮಾರಕ ರೋಗಗಳ ವಿರುದ್ಧ ಲಸಿಕೆ ನೀಡುವಿಕೆ.

2) ಕುಟುಂಬ ಕಲ್ಯಾಣ ಮತ್ತು ಲಸಿಕಾ ಸೇವೆಗಳನ್ನು 176 ಆಸ್ಪತ್ರೆಗಳು. 1357 ಪ್ರಾಥಮಿಕ ಆರೋಗ್ಯ ಕೇಂದ್ರಗಳು 613 ಪ್ರಾಥಮಿಕ ಆರೋಗ್ಯ ಘಟಕಗಳು ಮತ್ತು 7793 ಉಪಕೇಂದ್ರಗಳ ಮೂಲಕ ಒದಗಿಸಲಾಗುತ್ತದೆ.

3) ಸಂತಾನಹರಣ. ಶಸ್ತ್ರಚಿಕಿತ್ಸೆ ನಡೆಸಲು ಖಾಸಗಿ ನರ್ಸಿಂಗ್ ಹೋಂಗಳಿಗೆ ಮಾನ್ಯತೆ ನೀಡುವುದು.

4) ಸಂತಾನ ಹರಣ ಶಸ್ತ್ರಚಿಕಿತ್ಸೆ ನಡೆಸಲು ಆರೋಗ್ಯಾಧಿಕಾರಿಗಳಿಗೆ ಸೂಕ್ತ ತರಬೇತಿ ನೀಡುವುದು.

5) ಗ್ರಾಮಾಂತರ ಪ್ರದೇಶಗಳಲ್ಲಿ ಸುರಕ್ಷಿತ ಹೆರಿಗೆ ಮಾಡಲು ದಾದಿಯರಿಗೆ ತರಬೇತಿ ನೀಡುವುದು.

6) ವಂಕಿ ಅಳವಡಿಕೆ ವಿಧಾನದ ಬಗ್ಗೆ ಕಿರಿಯ ಮತ್ತು ಹಿರಿಯ ಆರೋಗ್ಯ ಸಹಾಯಕಿಯರಿಗೆ ತರಬೇತಿ ನೀಡುವುದು.

7) ಕುಟುಂಬ ಕಲ್ಯಾಣ ಮತ್ತು ಲಸಿಕಾ ಕಾರ್ಯಕ್ರಮ ಅನುಷ್ಠಾನದಲ್ಲಿ ಸ್ವಯಂ ಸೇವಾ ಸಂಸ್ಥೆಗಳನ್ನು ತೊಡಗಿಸಿಕೊಳ್ಳುವುದು.

8) ಸರ್ಕಾರದ ಇತರೆ ಇಲಾಖೆಗಳ ಸಹಕಾರ ಪಡೆಯುವುದು.

9) ಪ್ರತಿ ಜಿಲ್ಲೆಗೆ ಪ್ರತಿ ತಿಂಗಳಿಗೆ 15,000 ರೂ.ಗಳ ಅದೃಷ್ಟ ಬಹುಮಾನ ಯೋಜನೆಯನ್ನು ಜಾರಿಗೊಳಿಸುವುದು.

10) ಸಂತಾನ ಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಎರಡು ಮಕ್ಕಳನ್ನು ಮಾತ್ರ ಹೊಂದಿರುವ ಸರ್ಕಾರಿ ನೌಕರರಿಗೆ ಒಂದು ಹೆಚ್ಚುವರಿ ವಿಶೇಷ ಬಡ್ತಿಯನ್ನು ನೀಡುವುದು.

11) ಸರ್ಕಾರಿ ನೌಕರರಿಗೆ ವಿಶೇಷ ಸಾಂದರ್ಭಿಕ ರಜೆ ನೀಡುವುದು.

12) ಶಸ್ತ್ರಚಿಕಿತ್ಸೆಗೆ ಒಳಪಡುವ ಫಲಾನುಭವಿಗಳಿಗೆ ಹಸಿರುಪತ್ರ ವಿತರಣೆ.

13) ಶಸ್ತ್ರಚಿಕಿತ್ಸೆಗೆ ಒಳಪಟ್ಟವರಿಗೆ ಮತ್ತು ವಂಕಿ ಅಳವಡಿಸಿಕೊಂಡವರಿಗೆ ಪ್ರೋತ್ಸಾಹ ಧನ ನೀಡುವುದು.

**5. ಕುಟುಂಬ ಕಲ್ಯಾಣ ಮತ್ತು ಲಸಿಕಾ ಕಾರ್ಯಕ್ರಮ ಪ್ರಗತಿ :**

1992-93 ರಿಂದ 1994-95ನೇ ಸಾಲಿನ ಕುಟುಂಬ ಕಲ್ಯಾಣ ಕಾರ್ಯಕ್ರಮದ ವಿವಿಧ ವಿಧಾನಗಳ ಪ್ರಗತಿಯನ್ನು ಅನುಬಂಧ-Iರಲ್ಲಿ ಕೊಡಲಾಗಿದೆ.

**6. ಕುಟುಂಬ ಕಲ್ಯಾಣ ಮತ್ತು ಲಸಿಕಾ ಕಾರ್ಯಕ್ರಮದ ಪ್ರಗತಿಯು ಕುಂಠಿತವಾಗಿರುವುದಕ್ಕೆ ಕಾರಣಗಳು :**

1994 -95ನೇ ಸಾಲಿನಲ್ಲಿ ಪ್ರಗತಿ ಕುಂಠಿತವಾಗಿರುವುದಕ್ಕೆ ಕಾರಣಗಳು ಈ ಕೆಳಕಂಡಂತಿವೆ.

1) ಬೆಳಗಾವಿ ಮತ್ತು ಗುಲಬರ್ಗಾ ವಿಭಾಗಗಳಲ್ಲಿ ಖಾಲಿ ಹುದ್ದೆಗಳು.

2) ಗ್ಲೈಲೋಕೇನ್ ಮತ್ತು ಕ್ಯಾಟ್ ಗಟ್ಟನ್ನು ಒದಗಿಸುವಲ್ಲಿ ವಿಳಂಬ.

3) ತರಬೇತಿ ಹೊಂದಿದ ಸಿಬ್ಬಂದಿಯ (ಶಸ್ತ್ರ ಚಿಕಿತ್ಸಕರು) ಕೊರತೆ.

4) ಜಿಲ್ಲಾ ಪರಿಷತ್‌ಗಳಿಂದ ಸಕಾಲದಲ್ಲಿ ಹಣ ಬಿಡುಗಡೆಯಾಗದಿರುವುದು.

5) ಬೆಳಗಾವಿ ಮತ್ತು ಗುಲ್ಬರ್ಗಾ ವಿಭಾಗಗಳಲ್ಲಿ ಅನಕ್ಷರತೆ ಜಾಸ್ತಿ ಇರುವುದು.

6) ಆರ್ಥಿಕವಾಗಿ ಹಿಂದುಳಿದಿರುವಿಕೆ.

7) ಕುಟುಂಬ ಕಲ್ಯಾಣ ಕಾರ್ಯಕ್ರಮಗಳಿಗೆ ರೂಪಿಸಿರುವ ಹೊಸ ಮಾರ್ಗ :

ಆಂಧ್ರಪ್ರದೇಶ ಒಳಗೊಂಡಂತೆ ದಕ್ಷಿಣ ರಾಜ್ಯಗಳ ಸಾಧನೆಗಳಿಗೆ ಹೋಲಿಸಿದಾಗ ಕೆಲವು ಮುಖ್ಯ ಸೂಚಿಗಳಲ್ಲಿ (ಜನನ ದರ. ಮರಣ ದರ ಮತ್ತು ಶಿಶುಮರಣ ದರ) ಕರ್ನಾಟಕದ ಸಾಧನೆಯಲ್ಲಿ ಇಳಿಕೆಯನ್ನು ಕರ್ನಾಟಕ ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ.

ಕುಟುಂಬ ಕಲ್ಯಾಣ ಕಾರ್ಯಕ್ರಮದ ಆಚರಣೆಯಲ್ಲಿ ಹೊಸ ಬದಲಾವಣೆಯನ್ನು ತರುವ ಸಮಯ ಒದಗಿ ಬಂದಿದೆ.

**1) ಜನನದ ಅಂತರದ ಮಾರ್ಗ :**

ಕುಟುಂಬ ಕಲ್ಯಾಣ ಕಾರ್ಯಕ್ರಮವು ಸಂತಾನ ಹರಣ ಶಸ್ತ್ರಚಿಕಿತ್ಸೆಯ ಅಂಶದ ಮೇಲೆ ಕೇಂದ್ರೀಕೃತವಾಗಿದ್ದರೂ ಸಹ ಜನಸಂಖ್ಯಾ ಸಮಸ್ಯೆಗೆ ನೈಜ ಪರಿಹಾರ ಒದಗಿಸುವಲ್ಲಿ ಅದು ವಿಫಲಗೊಂಡಿದೆ. ಅಂತರ ವಿಧಾನಗಳಾದ ವಂಕಿ. ನಿರೋಧ್ ಮತ್ತು ನುಂಗುವ ಗುಳಿಗೆ ಇವು ಗಳ ಪ್ರಾಮುಖ್ಯತೆಯನ್ನು ಗುರುತಿಸಬೇಕಾಗಿದೆ. ಈ ವಿಧಾನಗಳ ಸಾಧನೆಯನ್ನು ಹೆಚ್ಚಿಸಲು ಜಿಲ್ಲಾಧಿಕಾರಿಗಳು. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಕಾರ್ಯ ವರ್ಗದವರನ್ನು ಒಳಗೊಂಡ ಕ್ರಿಯಾಯೋಜನೆಯ ಕಾರ್ಯಕ್ರಮವನ್ನು ರೂಪಿಸಲಾಗುತ್ತಿದೆ.

**2) ಪುರುಷರು ಭಾಗವಹಿಸುವುದು :**

ಕರ್ನಾಟಕದಲ್ಲಿ ಶಸ್ತ್ರಚಿಕಿತ್ಸೆಯಾದವರಲ್ಲಿ ಶೇಕಡಾ 1 ಕಿಂತ ಕಡಿಮೆ ಪುರುಷ ಶಸ್ತ್ರಚಿಕಿತ್ಸೆ ಯಾಗಿರುತ್ತದೆ. 1995-96ನೇ ಸಾಲಿನಲ್ಲಿ ಒಟ್ಟು ಶಸ್ತ್ರಚಿಕಿತ್ಸೆಯ ಗುರಿಯಲ್ಲಿ ಶೇ 10ರಷ್ಟು ಪುರುಷ ಶಸ್ತ್ರಚಿಕಿತ್ಸೆಯ ಗುರಿಯನ್ನು ನಿಗದಿಪಡಿಸಲಾಗಿದೆ. ಇಲ್ಲಿಯವರೆಗೆ 'ನೋ ಸ್ಕಾಲ್ಪಲ್ ಪುರುಷ ಶಸ್ತ್ರ ಚಿಕಿತ್ಸೆ' ತಂತ್ರದಲ್ಲಿ ಎಂಟು ಜನ ವೈದ್ಯರು ತರಬೇತಿ ಹೊಂದಿರುತ್ತಾರೆ. ಕರ್ನಾಟಕ ದಲ್ಲಿ ಈ ತಂತ್ರ ಜ್ಞಾನವನ್ನು ಇನ್ನೂ ಹೆಚ್ಚು ವೈದ್ಯರಿಗೆ ತರಬೇತಿ ನೀಡಲು ಗುಲ್ಬರ್ಗಾ ಮತ್ತು ಬೆಂಗಳೂರು ನಗರ ಪಾಲಿಕೆಯಲ್ಲಿ ತರಬೇತಿ ಕಾರ್ಯಕ್ರಮ ಕೈಗೊಳ್ಳಲಾಯಿತು.

**3) ಪುರುಷ ಶಸ್ತ್ರ ಚಿಕಿತ್ಸೆ, ಹೆಣ್ಣು ಮಗು ಮತ್ತು ಅಂತರ ಇವುಗಳ ಸಂಬಂಧ :**

ಪುರುಷ ಶಸ್ತ್ರಚಿಕಿತ್ಸೆಯನ್ನು ಹೆಚ್ಚು ಜನಪ್ರಿಯಗೊಳಿಸಲು ಸರ್ಕಾರವು ಕುಟುಂಬ ಕಲ್ಯಾಣ ವಿಧಾನವನ್ನು ಅನುಸರಿಸಿದವರಿಗೆ ಪ್ರೋತ್ಸಾಹ ಧನ ನೀಡಲು ಯೋಚಿಸಿದೆ. ಈ ಪ್ರಕಾರ ಒಂದೇ ಹೆಣ್ಣು ಮಗುವನ್ನು ಹೊಂದಿದ್ದು. ಪುರುಷ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಅಂತರದ

ವಿಧಾನವನ್ನು ಅನುಸರಿಸಿದವರಿಗೆ ಪ್ರೋತ್ಸಾಹಧನ ನೀಡುವ ಯೋಜನೆಯನ್ನು ಜಾರಿಗೊಳಿಸಿದೆ. ಈ ಪ್ರೋತ್ಸಾಹ ಧನವನ್ನು ಸಂದರ್ಭಾನುಸಾರವಾಗಿ 2000 ರೂ.ನಿಂದ 5000 ರೂ.ಗಳವರೆಗೆ ರಾಷ್ಟ್ರೀಯ ಉಳಿತಾಯ ಯೋಜನೆಯ ಸರ್ಟಿಫಿಕೇಟ್ ಮೂಲಕ ವಿತರಿಸಲಾಗುತ್ತಿವೆ.

**4) ಸಮುದಾಯ ಬಹುಮಾನಗಳು :**

ಕುಟುಂಬ ಕಲ್ಯಾಣ ಯೋಜನೆಯನ್ನು ಸಂಪೂರ್ಣವಾಗಿ ಜಾರಿಗೊಳಿಸಲು ಗ್ರಾಮಸ್ಥರು ಸಾಮೂಹಿಕವಾಗಿ ಆಸಕ್ತಿ ತಳೆಯುವಂತೆ ಮಾಡುವ ಅವಶ್ಯಕತೆ ಇದೆ. ಈ ಸಂಬಂಧದಲ್ಲಿ ಯಾವ ಗ್ರಾಮ ಪಂಚಾಯ್ತಿಯು ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಅಸಾಧಾರಣ ಪ್ರಗತಿಯನ್ನು ಸಾಧಿಸುವುದೋ. ಅಂತಹ ಗ್ರಾಮ ಪಂಚಾಯ್ತಿಗೆ. ಗ್ರಾಮಕ್ಕೆ ಅವಶ್ಯಕತೆ ಇರುವ ವಿದ್ಯುಚ್ಛಕ್ತೀಕರಣ. ಶಾಲಾ ಕೊಠಡಿ. ನಿರ್ಮಾಣ. ಕೊಳವೆ ಬಾವಿಗಳನ್ನು ತೋಡಿಸುವುದು. ಮುಂತಾದ ಸವಲತ್ತುಗಳನ್ನು ಒದಗಿಸುವ ಸಲುವಾಗಿ 50,000 ರೂ.ಗಳ ನಗದು ಹಣವನ್ನು ಒದಗಿಸಲಾಗುವುದು.

**5) ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು :**

ಕುಟುಂಬ ಕಲ್ಯಾಣ ಕಾರ್ಯಕ್ರಮದ ಬಗ್ಗೆ ಅದರಲ್ಲೂ. ವಿಶೇಷವಾಗಿ ಒಂದೇ ಹೆಣ್ಣು ಮಗುವನ್ನು ಹೊಂದಿರುವ ಕುಟುಂಬದವರನ್ನು ಪುರುಷ ಶಸ್ತ್ರಚಿಕಿತ್ಸೆಗೆ ಒಳಪಡುವಂತೆ ಮನ ಒಲಿಸಲು. ಅಂತರದ ವಿಧಾನವನ್ನು ಅನುಸರಿಸಲು. ನೋಸ್ಕಾಲ್ಪಲ್ ವಿಧಾನದ ಬಗ್ಗೆ ಮತ್ತು ವಿವಾಹದ ವಯಸ್ಸು ಇವುಗಳ ಬಗ್ಗೆ ಜನರಿಗೆ ಹೆಚ್ಚಿನ ಅರಿವು ಮೂಡಿಸುವ ಸಲುವಾಗಿ ಮಾಹಿತಿ. ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲಾಗುತ್ತಿದೆ.

**6) ನಿರೋಧ್ ವಿತರಣೆಯ ವಿಶೇಷ ಮಾರುಕಟ್ಟೆ :**

ನಿರೋಧ್ ಬಳಕೆಯ ಮೂಲಕ ಅಂತರದ ವಿಧಾನದಲ್ಲಿ ಹೆಚ್ಚಿನ ಅರಿವು ಮೂಡುವಂತೆ 'ಸ್ಕೋವ' ಮುಖಾಂತರ ಸರ್ಕಾರೇತರ ಸಂಸ್ಥೆಗಳನ್ನು ಇದಕ್ಕೆ ಒಳಪಡುವಂತೆ ಮಾಡಲು ಯೋಚಿಸಲಾಗುತ್ತಿದೆ.

**7) ಒಂದು ರಂಧ್ರದ ಉದರ ದರ್ಶಕ ಶಸ್ತ್ರಚಿಕಿತ್ಸೆಯಲ್ಲಿ ತರಬೇತಿ :**

ಈ ರಾಜ್ಯದಲ್ಲಿ ಶಸ್ತ್ರಚಿಕಿತ್ಸಕರುಗಳಿಗೆ ಎರಡು ರಂಧ್ರ ಮಾಡಿ ಉದರ ದರ್ಶಕ ಶಸ್ತ್ರಚಿಕಿತ್ಸೆ ಮಾಡಲು ತರಬೇತಿ ನೀಡಿದೆ. ತಾಂತ್ರಿಕ ವಿಷಯಗಳ ಪರಿಣಿತ ಸಮಿತಿಯ ನಿರ್ಣಯದ ಪ್ರಕಾರ ಭಾರತ ಸರ್ಕಾರವು ಒಂದು ರಂಧ್ರದ ಉದರ ದರ್ಶಕ ಶಸ್ತ್ರ ಚಿಕಿತ್ಸೆಯನ್ನೇ ಬಳಕೆಗೆ ತರಲು ಈಗ ಶಸ್ತ್ರ ಚಿಕಿತ್ಸಕರಿಗೆ (ಸರ್ಜನ್‌ಗಳಿಗೆ) ತರಬೇತಿ ಕೊಡುವ ಮೂಲಕ ಇದನ್ನು ಸಾಧಿಸಬಹುದೆಂದು ಅಭಿಪ್ರಾಯಪಟ್ಟಿದೆ.

**8) ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು :**

ಪರಸ್ಪರ ವ್ಯಕ್ತಿಯೂ. ವಿವಿಧ ಸಂಘ ಸಂಸ್ಥೆಗಳ. ವಿವಿಧ ಮಾಧ್ಯಮಗಳ ಮತ್ತು ಸಾಮೂಹಿಕ ಸಂಪರ್ಕದ ಮೂಲಕ ಜನ ಸಮುದಾಯದಲ್ಲಿ ಸಣ್ಣ ಕುಟುಂಬದ ಬಗ್ಗೆ ತಿಳುವಳಿಕೆ ಮತ್ತು ಅದರ

ಅನುಷ್ಠಾನವನ್ನು ಜಾರಿಗೆ ತರಲು ಭಾರತ ಸರ್ಕಾರದ ಮಾರ್ಗದರ್ಶನದಂತೆ 1994-95ನೇ (ಡಿಸೆಂಬರ್ 94ರ ಅಂತ್ಯದವರೆಗೆ) ಸಾಲಿನಲ್ಲಿ ಮಾಹಿತಿ. ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳನ್ನು ನಡೆಸಲಾಯಿತು. ಅದರ ಸಾಧನಗಳನ್ನು ಅನುಬಂಧ- IIರಲ್ಲಿ ಕೊಡಲಾಗಿದೆ.

**9) ಬಾಣಂತಿ ಸೇವಾ ಕಾರ್ಯಕ್ರಮ :**

ಕರ್ನಾಟಕ ರಾಜ್ಯದಲ್ಲಿ ಈ ಕೆಳಕಂಡ 103 ವಿವಿಧ ಮಾದರಿಯ ಬಾಣಂತಿ ಸೇವಾ ಕೇಂದ್ರ ಗಳು ಕಾರ್ಯ ನಿರ್ವಹಿಸುತ್ತಲಿವೆ.

| | | |
|---|---|---|
| 'ಎ' ಮಾದರಿ | - | 12 |
| 'ಬಿ' ಮಾದರಿ | - | 10 |
| 'ಸಿ' ಮಾದರಿ | - | 17 |
| ಉಪಕೇಂದ್ರ ಮಟ್ಟದ ಮಾದರಿ | - | 64 |

ಭಾರತ ಸರ್ಕಾರವು 1994-95ನೇ ಸಾಲಿನಿಂದ ಗಣಕಯಂತ್ರದ ಮೂಲಕ ಕ್ರೋಢೀ ಕರಣ ಮಾಡಲು ಅನುಕೂಲವಾದ ಹೊಸ ತ್ರೈಮಾಸಿಕ ವರದಿಯ ನಮೂನೆಗಳನ್ನು ಜಾರಿಗೆ ತಂದಿದೆ. ಈ ತ್ರೈಮಾಸಿಕ ವರದಿಗಳನ್ನು ಪ್ರತಿ ತ್ರೈಮಾಸಿಕ ಅಂತ್ಯಗೊಂಡ 10ನೇ ತಾರೀಖಿನೊಳಗೆ ಸ್ವೀಕರಿಸಿ. ಅದನ್ನು ರಾಜ್ಯ ಮಟ್ಟದಲ್ಲಿ ಕ್ರೋಢೀಕರಿಸಿ. ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯಕ್ಕೆ ಕಳುಹಿಸಲಾಗುತ್ತಿದೆ.

ಈ ವರದಿಗಳನ್ನು ರಾಜ್ಯಮಟ್ಟದಲ್ಲಿ ಗಣಕೀಕರಣ ಮಾಡಿ ಪ್ರತಿ ಮೂರು ತಿಂಗಳಿ- ಗೊಮ್ಮೆ ಸಂಸ್ಥಾವಾರು ಪ್ರಗತಿಯನ್ನು ಪರಿಶೀಲಿಸಲಾಗುತ್ತದೆ. ಪ್ರಗತಿಯನ್ನು ಪರಿಶೀಲಿಸಿದಾಗ ಬಾಣಂತಿ ಸೇವಾ ಕೇಂದ್ರಗಳ ಪ್ರಗತಿಯು ಒಟ್ಟು ಪ್ರಗತಿಯ ಶೇ. 20ರಷ್ಟಿರುತ್ತದೆ.

**10) ವೈದ್ಯಕೀಯ ಗರ್ಭಪಾತ :**

ವೈದ್ಯಕೀಯ ಗರ್ಭಪಾತ ಕಾಯ್ದೆಯನ್ನು 1971ರಲ್ಲಿ ಸಂಸತ್ತಿನಲ್ಲಿ ಅಂಗೀಕರಿಸಿ 1972 ರಿಂದ ರಾಷ್ಟ್ರದಾದ್ಯಂತ ಜಾರಿಗೆ ತರಲಾಯಿತು. ವೈದ್ಯಕೀಯ ಗರ್ಭಪಾತ ಸೇವೆಯನ್ನು ನೀಡಲು 471 ಕೇಂದ್ರಗಳನ್ನು ಗುರ್ತಿಸಿ ಮಾನ್ಯತೆ ನೀಡಿದೆ. ಇದರಲ್ಲಿ ಸರ್ಕಾರಿ ಸಂಸ್ಥೆಗಳು. ಖಾಸಗಿ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಂಗಳು ಸೇರಿವೆ. ಅಂದರೆ. 325 ಸರ್ಕಾರಿ ಸಂಸ್ಥೆಗಳು. 146 ಖಾಸಗಿ ಆಸ್ಪತ್ರೆ ಮತ್ತು ನರ್ಸಿಂಗ್ ಹೋಂಗಳು ಸೇರಿವೆ.

1994-95 (ಡಿಸೆಂಬರ್ 94ರ ಅಂತ್ಯಕ್ಕೆ) ನೇ ಸಾಲಿನಲ್ಲಿ 5939 ವೈದ್ಯಕೀಯ ಗರ್ಭಪಾತಗಳನ್ನು ಮಾಡಲಾಗಿದೆ. ಈ ಕಾರ್ಯಕ್ರಮದಲ್ಲಿ ಗುರಿಯನ್ನು ನಿಗದಿ ಮಾಡಿರು ವುದಿಲ್ಲ.

11) ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ :

ಮಕ್ಕಳು ಮತ್ತು ಗರ್ಭಿಣಿ ಸ್ತ್ರೀಯರು ಖಾಯಿಲೆಗಳಿಂದ ನರಳುವುದನ್ನು ಮತ್ತು ಮರಣ ಹೊಂದುವುದನ್ನು ಕಡಿಮೆ ಮಾಡುವ ಉದ್ದೇಶದಿಂದ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮವನ್ನು ರಾಜ್ಯದಲ್ಲಿ 1989-90ನೇ ಸಾಲಿನಿಂದ ಜಾರಿಗೆ ತರಲಾಯಿತು.

ಮಗುವಿಗೆ ಒಂದು ವರ್ಷ ತುಂಬುವುದರೊಳಗಾಗಿ ನೂರಕ್ಕೆ ನೂರರಷ್ಟು ಮೂರು ವರಸೆ ಡಿಪಿಟಿ ಮತ್ತು ಪೋಲಿಯೋ, ಒಂದು ವರಸೆ ಬಿಸಿಜಿ ಮತ್ತು ಒಂದು ವರಸೆ ದಢಾರ ಲಸಿಕೆಗಳನ್ನು ನೀಡುವ ಧ್ಯೇಯದಿಂದ ಈ ಕಾರ್ಯಕ್ರಮವನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ.

1994-95 (ಡಿಸೆಬಂರ್ 94ರ ಅಂತ್ಯಕ್ಕೆ) ನೇ ಸಾಲಿನಲ್ಲಿ ಈ ಕಾರ್ಯಕ್ರಮದಡಿಯಲ್ಲಿ ಆರು ಲಸಿಕೆಗಳಾದ ಡಿ. ಪಿ.ಟಿ.. ಪೋಲಿಯೋ. ಬಿಸಿಜಿ ಮತ್ತು ದಢಾರ ವಿರುದ್ಧದ ಲಸಿಕೆ ನೀಡುವ ಕಾರ್ಯಕ್ರಮದಲ್ಲಿ ವಾರ್ಷಿಕ ಗುರಿಯ ಶೇಕಡ ಕ್ರಮವಾಗಿ 90.9.91.1. 99.2. 83.4 ಮತ್ತು 92.6 ರಷ್ಟು ಪ್ರಗತಿ ಸಾಧಿಸಿದೆ. 1994-95ನೇ (ಡಿಸೆಂಬರ್ 94ರ ಅಂತ್ಯಕ್ಕೆ) ಸಾಲಿನ ವಾರ್ಷಿಕ ಗುರಿ ಹಾಗೂ ಸಾಧನೆಗಳು ವಿವರಗಳನ್ನು ಅನುಬಂಧ- I ರಲ್ಲಿ ಕೊಡಲಾಗಿದೆ.

12) ಶಿಶು ಸಂರಕ್ಷಣೆ ಮತ್ತು ಸುರಕ್ಷಿತ ತಾಯ್ತನ ಕಾರ್ಯಕ್ರಮ :

ಈ ಕಾರ್ಯಕ್ರಮವನ್ನು 1992-93ರಲ್ಲಿ ಈ ಕೆಳಗಿನ ಧ್ಯೇಯಗಳೊಂದಿಗೆ ಏಳು ಜಿಲ್ಲೆಗಳಲ್ಲಿ, ಹಾಗೂ 1994-95(ಡಿಸೆಂಬರ್ 94ರ ಅಂತ್ಯಕ್ಕೆ) ಐದು ಜಿಲ್ಲೆಗಳಲ್ಲಿ ಜಾರಿಗೆ ತರಲಾಗಿದೆ.

1) ಶಿಶು ಮರಣ ದರವನ್ನು 2000 ಇಸವಿಯ ವೇಳೆಗೆ 67 ರಿಂದ 60ಕ್ಕೆ ಇಳಿಸುವುದು.

2) ಮಕ್ಕಳ ಮರಣ ದರವನ್ನು 2000 ಇಸವಿಯ ವೇಳೆಗೆ 41ರಿಂದ 10 ಕ್ಕಿಂತ ಕಡಿಮೆ ಮಾಡುವುದು

3) ತಾಯಿಯ ಮರಣ ದರವನ್ನು 2000 ಇಸವಿಯ ವೇಳೆಗೆ ಪ್ರತಿ ಸಾವಿರಕ್ಕೆ 4 ರಿಂದ 2 ಕ್ಕೆ ಇಳಿಸುವುದು.

4) 2000 ಇಸವಿ ವೇಳೆಗೆ ಪೋಲಿಯೋ ನಿರ್ಮೂಲನೆ.

5) 1995ನೇ ಇಸವಿ ವೇಳೆಗೆ ಬಾಣಂತಿಯರಿಗೆ ಬರಬಹುದಾದ ಧನುರ್ವಾಯು ರೋಗದ ನಿರ್ಮೂಲನೆ.

1994-95 (ಡಿಸೆಂಬರ್ 94ರ ಅಂತ್ಯಕ್ಕೆ ) ನೇ ಸಾಲಿನಲ್ಲಿ ಈ ಕಾರ್ಯಕ್ರಮವನ್ನು ಜಾರಿಗೆ ತಂದಿರುವ 5 ಜಿಲ್ಲೆಗಳಲ್ಲಿ ವೈದ್ಯಾಧಿಕಾರಿಗಳಿಗೆ ಮತ್ತು ಅರೆ ವೈದ್ಯ ಸಿಬ್ಬಂದಿಗೆ ತರಬೇತಿಯನ್ನು ಕೊಡಲಾಯಿತು. ತರಬೇತಿ ನೀಡಿದ ಜಿಲ್ಲಾವಾರು ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

| ಜಿಲ್ಲೆ | ವೈದ್ಯಾಧಿಕಾರಿಗಳು | ಅರೆ-ವೈದ್ಯ ಸಿಬ್ಬಂದಿಗಳು |
|---|---|---|
| 1) ಬೀದರ್ | 88 | 67 |
| 2) ಬಳ್ಳಾರಿ | 57 | 375 |
| 3) ಗುಲ್ಬರ್ಗಾ | - | - |
| 4) ರಾಯಚೂರು | 56 | 242 |
| 5) ಬಿಜಾಪುರ | - | - |

**13) ತರಬೇತಿ ಕಾರ್ಯಕ್ರಮ :**

**ಅ) ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ :**

ರಾಜ್ಯದಲ್ಲಿ ಪ್ರತಿಯೊಂದು ಜಿಲ್ಲೆಗೆ ಒಂದರಂತೆ 19 ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಿದ್ದು, ಪ್ರತಿಯೊಂದು ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದೆ. 1994-95ನೇ (ಡಿಸೆಂಬರ್ 94ರ ಅಂತ್ಯಕ್ಕೆ) ಸಾಲಿನಲ್ಲಿ 550 ಅಭ್ಯರ್ಥಿಗಳಿಗೆ ತರಬೇತಿ ನೀಡಲಾಯಿತು.

**ಆ) ಹಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ :**

4 ತರಬೇತಿ ಕೇಂದ್ರಗಳು, ಬೆಂಗಳೂರು, ಮಂಗಳೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕೆಲಸದಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ, ಮುಂದೆ ಹಿರಿಯ ಮಹಿಳಾ ಆರೋಗ್ಯ ಸಹಾಯಕರಾಗಿ ಬಡ್ತಿ ಹೊಂದಲು ಅನುಕೂಲವಾಗುವಂತೆ ತರಬೇತಿಯನ್ನು ನೀಡುತ್ತಿದೆ. ಪ್ರತಿ ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದೆ. 1994-95(ಡಿಸೆಂಬರ್ 94ರ ಅಂತ್ಯಕ್ಕೆ)ನೇ ಸಾಲಿನಲ್ಲಿ 122 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲಾಯಿತು.

**ಇ) ದಾದಿಯರ ತರಬೇತಿ ಕಾರ್ಯಕ್ರಮ :**

ಸ್ಥಳೀಯ ದಾದಿಯರಿಗೆ ಹೊಸ ರೀತಿಯಲ್ಲಿ ತರಬೇತಿ ಕೊಡುವ ಕಾರ್ಯಕ್ರಮವನ್ನು ರಾಜ್ಯದಲ್ಲಿ ಜಾರಿಗೆ ತರಲಾಗಿದೆ. ಈ ಯೋಜನೆಯು ಶೇ. 100ರಷ್ಟು ಕೇಂದ್ರ ಪುರಸ್ಕೃತ ಯೋಜನೆಯಾಗಿರುತ್ತದೆ. ಈ ಹೊಸ ರೀತಿಯ ತರಬೇತಿಯನ್ನು ದಾದಿಯರಿಗೆ (ತರಬೇತಿ ಹೊಂದಿದ ಮತ್ತು ತರಬೇತಿ ಇಲ್ಲದ) ತಾಲ್ಲೂಕು ಮಟ್ಟದ ಹೆರಿಗೆ ಆಸ್ಪತ್ರೆ, ಜಿಲ್ಲಾ ಉಪಕೇಂದ್ರ

ಮಟ್ಟದ ಬಾಣಂತನ ಸೇವಾ ಕೇಂದ್ರ ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ 5-6 ಜನ ದಾದಿಯರಿಗೆ ಒಂದು ಗುಂಪಿನಂತೆ 6 ದಿನಗಳ ತರಬೇತಿಯನ್ನು ಕೊಡಲಾಗುತ್ತಿದೆ. (ಈ ತರಬೇತಿಯನ್ನು ವಿಶೇಷವಾಗಿ ತರಬೇತಿ ಹೊಂದಿದ ಮಹಿಳಾ ಆರೋಗ್ಯ ಸಂದರ್ಶಕರಿಂದ ಮೂರು ದಿನಗಳ ಸಾಲ ಕೊಡಲಾಗುತ್ತಿದೆ) ಈ ತರಬೇತಿಯನ್ನು ಆಸ್ಪತ್ರೆಯ ಸ್ತ್ರೀ ರೋಗ ತಜ್ಞರ ಮೇಲ್ವಿಚಾರಣೆ ಹಾಗೂ ಮಾರ್ಗದರ್ಶನದಂತೆ ಕೊಟ್ಟು ತರಬೇತಿ ಕೊನೆಯಲ್ಲಿ ಪ್ರತಿಯೊಂದು ದಾದಿಯರಿಗೆ ರೂ. 250.00ಗಳ ತುಟ್ಟಿ ಭತ್ಯೆ ಮತ್ತು ತರಬೇತಿಗೆ ಬಂದು ಹೋಗುವ ಪ್ರಯಾಣಭತ್ಯೆ ಮತ್ತು ಹೆರಿಗೆ ಸಾಮಗ್ರಿಗಳ ಪೆಟ್ಟಿಗೆಯನ್ನು ಕೊಡಲಾಗುತ್ತಿದೆ. ರಾಜ್ಯವು ಇದುವರೆಗೆ 31.540 ದಾದಿಯರನ್ನು ನೋಂದಾಯಿಸಿದೆ. ಈ ಕಾರ್ಯಕ್ರಮಕ್ಕೆ 1994-95ನೇ ಸಾಲಿನ ಆಯವ್ಯಯದಲ್ಲಿ 6000 ದಾದಿಯರಿಗೆ ತರಬೇತಿ ನೀಡಲು 25.20 ಲಕ್ಷರೂ. ಗಳನ್ನು ನಿಗದಿ ಮಾಡಲಾಗಿದೆ. ಈ ಪೈಕಿ 12.60 ಲಕ್ಷ ರೂ.ಗಳನ್ನು ಭಾರತ ಸರ್ಕಾರವು 1994ನೇ ಡಿಸೆಂಬರ್ ಮಾಹೆಯವರೆಗೆ ಬಿಡುಗಡೆ ಮಾಡಿದೆ. ಈಗ ಬಿಡುಗಡೆಯಾಗಿರುವ ಹಣದಲ್ಲಿ 3000 ದಾದಿಯರಿಗೆ ತರಬೇತಿಯನ್ನು ನೀಡಬಹುದಾಗಿದೆ. ಈ ತರಬೇತಿ ಕಾರ್ಯಕ್ರಮವು ಅತಿ ಶೀಘ್ರದಲ್ಲಿಯೇ ಪ್ರಾರಂಭವಾಗಲಿದ್ದು 1995ನೇ ಮಾರ್ಚ್ ಅಂತ್ಯಕ್ಕೆ ಗುರಿ ನಿಗಧಿ ಯಾಗಿರುವ 3000 ದಾದಿಯರಿಗೆ ಅಂದರೆ 1995ನೇ ಜನವರಿ, ಫೆಬ್ರವರಿ ಮತ್ತು ಮಾರ್ಚ್ ಮಾಹೆಗಳಲ್ಲಿ ಪ್ರತಿ ಮಾಹೆಗೆ 1000 ದಾದಿಯರಂತೆ ತರಬೇತಿಯನ್ನು ಪೂರ್ಣಗೊಳಿಸಬಹುದು.

**ಈ) ಕ್ರಾಫ್ಟ್ ತರಬೇತಿ ಕಾರ್ಯಕ್ರಮ :**

ಈ ಯೋಜನೆಯು ಶೇಕಡ ನೂರರಷ್ಟು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, 1995 ನೇ ಫೆಬ್ರವರಿ ಮತ್ತು ಮಾರ್ಚ ತಿಂಗಳುಗಳಲ್ಲಿ ಜಿಲ್ಲಾ ಬಾಣಂತನ ಸೇವಾ ಕೇಂದ್ರಗಳಲ್ಲಿ ಪ್ರತಿಯೊಂದು ತಿಂಗಳಿಗೆ 100 ಹಿರಿಯ ಮಹಿಳಾ ಆರೋಗ್ಯ ಕಾರ್ಯಕರ್ತೆಯರು ಹಾಗೂ ಕಿರಿಯ ಮಹಿಳಾ ಆರೋಗ್ಯ ಕಾರ್ಯಕರ್ತರಿಗೆ ವಂಕಿ ಧಾರಣೆ ತಂತ್ರಜ್ಞಾನದ ಬಗ್ಗೆ ತರಬೇತಿಯನ್ನು ಕೊಡಲಾಗುವುದು. ಈ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ 4.00 ಲಕ್ಷ ರೂಗಳನ್ನು ನಿಗದಿ ಮಾಡಿ, ಈಗಾಗಲೇ 2.00 ಲಕ್ಷರೂ.ಗಳನ್ನು ಖರ್ಚು ಮಾಡಲಾಗಿದ್ದು, ಇನ್ನುಳಿದ 2.00 ಲಕ್ಷರೂ.ಗಳನ್ನು 1995ನೇ ಮಾರ್ಚ್ ಮಾಹೆಯ ಅಂತ್ಯಕ್ಕೆ ಉಪಯೋಗಿಸಲಾಗುವುದು.

**ಉ) ವೈದ್ಯಕೀಯ ಗರ್ಭಪಾತ ತರಬೇತಿ :**

ವಿವಿಧ ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳಲ್ಲಿ ಕೆಲಸ ಮಾಡುವ ವೈದ್ಯರುಗಳಿಗೆ ಬೋಧಕ ಸಂಸ್ಥೆಗಳಿಗೆ ಸೇರಿದ 10 ತರಬೇತಿ ಸಂಸ್ಥೆಗಳಲ್ಲಿ ವೈದ್ಯಕೀಯ ಗರ್ಭಪಾತದ ಬಗ್ಗೆ 30 ದಿನಗಳ ಕಾಲ ತರಬೇತಿಯನ್ನು ನೀಡಲಾಗುತ್ತಿದೆ. 1994-95 (ಡಿಸೆಂಬರ್ 94ರ ಅಂತ್ಯಕ್ಕೆ)ನೇ ಸಾಲಿನಲ್ಲಿ 33 ವೈದ್ಯರುಗಳಿಗೆ ತರಬೇತಿ ನೀಡಲಾಗಿದೆ.

**ಊ) ಉದರ ದರ್ಶಕ ಶಸ್ತ್ರ ಚಿಕಿತ್ಸೆ :**

ಬೆಂಗಳೂರಿನ ವಾಣಿವಿಲಾಸ ಆಸ್ಪತ್ರೆ, ಕರ್ನಾಟಕ ವೈದ್ಯಕೀಯ ಮಹಾ ವಿದ್ಯಾಲಯ ಆಸ್ಪತ್ರೆ, ಹುಬ್ಬಳ್ಳಿ, ಕಸ್ತೂರ್ ಬಾ ವೈದ್ಯಕೀಯ ಮಹಾ ವಿದ್ಯಾಲಯ, ಮಣಿಪಾಲ,

ಜಿಲ್ಲಾ ಆಸ್ಪತ್ರೆ. ಬೆಳಗಾಂ ಮತ್ತು ಗುಲ್ಬರ್ಗಾ. ಸ್ತ್ರೀರೋಗ ಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೋಮ ಹೊಂದಿರುವ ವೈದ್ಯರು ಹಾಗೂ ಒಬ್ಬ ಶಸ್ತ್ರಚಿಕಿತ್ಸೆಯ ಶುಶ್ರೂಷಕ ಮತ್ತು ಒಬ್ಬ ಶಸ್ತ್ರಚಿಕಿತ್ಸೆಯ ಸಹಾಯಕಿಯರಿಗೆ 45 ದಿನಗಳ ಕಾಲ ತರಬೇತಿಯನ್ನು ನೀಡಲಾಗುತ್ತಿದೆ. 1994-95 (ಡಿಸೆಂಬರ್ 94ರ ಅಂತ್ಯಕ್ಕೆ) ನೇ ಸಾಲಿನಲ್ಲಿ 19 ವೈದ್ಯರಿಗೆ ತರಬೇತಿಯನ್ನು ನೀಡಲಾಗಿದೆ.

ಋ) ಅನುದಾನ ನೀಡಿಕೆ ಮತ್ತು ಖರ್ಚು ವಿವರಗಳನ್ನು ಅನುಬಂಧ - IV ರಲ್ಲಿ ಕೊಡಲಾಗಿದೆ.

# ಅನುಬಂಧ – 1

## ರಾಷ್ಟ್ರೀಯ ಕುಟುಂಬ ಕಲ್ಯಾಣ ಕಾರ್ಯಕ್ರಮ

| | 1992-93 | | | 1993-94 | | | 1994-95 | | |
|---|---|---|---|---|---|---|---|---|---|
| ಕಾರ್ಯಕ್ರಮ | ಗುರಿ | ಸಾಧನೆ | ಶೇ. | ಗುರಿ | ಸಾಧನೆ | ಶೇ. | ಗುರಿ | ಸಾಧನೆ | ಶೇ. |
| **1. ಕುಟುಂಬ ಕಲ್ಯಾಣ ಕಾರ್ಯಕ್ರಮ** | | | | | | | | | |
| 1) ಸಂತಾನ ಹರಣ ಶಸ್ತ್ರ ಚಿಕಿತ್ಸೆ | 360000 | 331554 | 92.0 | 380000 | 356344 | 93.7 | 418000 | 279258 | 66.8 |
| 2) ವಂಕಿ ಅಳವಡಿಕೆ | 290000 | 237820 | 82.0 | 300000 | 274084 | 91.3 | 331000 | 218525 | 66.0 |
| 3) ನಿರೋಧ್ ಬಳಕೆದಾರರು | 280000 | 265022 | 94.6 | 357000 | 318502 | 89.2 | 393000 | 380900 | 96.9 |
| 4) ನುಂಗುವ ಮಾತ್ರೆ ಬಳಕೆದಾರರು | 112000 | 81561 | 72.8 | 140000 | 109037 | 77.8 | 155000 | 129030 | 83.2 |
| **2. ಲಸಿಕಾ ಕಾರ್ಯಕ್ರಮ** | | | | | | | | | |
| 1) ಡಿ ಪಿ ಟಿ | 1185800 | 1088063 | 91.7 | 1229367 | 1158047 | 94.2 | 1188600 | 843048 | 70.9 |
| 2) ಪೋಲಿಯೋ | 1185800 | 1091043 | 92.0 | 1229367 | 1160231 | 94.3 | 1188600 | 844407 | 71.0 |
| 3) ಬಿ.ಸಿ.ಜಿ. | 1185800 | 1189461 | 100.3 | 1229367 | 1254185 | 102.0 | 1188600 | 919751 | 77.4 |
| 4) ದಢಾರ | 1185800 | 1013485 | 85.5 | 1229367 | 1093131 | 88.9 | 1188600 | 772850 | 65.0 |
| 5) ಡಿ ಟಿ | 950000 | 956344 | 100.7 | 1169400 | 1041105 | 89.0 | 1169500 | 662260 | 56.6(.) |
| 6) ಟಿ ಟಿ ಗರ್ಭಿಣಿಯರು | 1275100 | 1216273 | 95.4 | 1358345 | 1296659 | 95.4 | 1316300 | 950993 | 72.2 |
| 7) ಟಿ ಟಿ (10 ವರ್ಷ) | 856000 | 733897 | 85.7 | 1179800 | 863815 | 73.2 | 1129800 | 582673 | 51.4(.) |
| 8) ಟಿ ಟಿ (16 ವರ್ಷ) | 856000 | 499376 | 58.4 | 1082100 | 602714 | 55.7 | 1078000 | 363278 | 33.7(.) |

(.)ನವೆಂಬರ್ 1994ರ ಅಂತ್ಯದವರೆಗೆ.

## ಅನುಬಂಧ – 11

## 1994-95 ನೇ ಸಾಲಿನ ಸಮೂಹ ಶಿಕ್ಷಣ ಮಾಧ್ಯಮ ಕಾರ್ಯ ಚಟುವಟಿಕೆಗಳ ಗುರಿ ಮತ್ತು ಸಾಧನೆ

| ಕ್ರಮ ಸಂಖ್ಯೆ | ಕಾರ್ಯ ಚಟುವಟಿಕೆಗಳು | 1994-95 ಗುರಿ | (ಸಾಧನೆ 94) |
|---|---|---|---|
| 1. | **ಮಹಿಳಾ ಆರೋಗ್ಯ ಸಂಘಗಳು :** | | |
| | ಅ) ಮಹಿಳಾ ಆರೋಗ್ಯ ಸಂಘಗಳ ಸ್ಥಾಪನೆ | 1205 | 0683 |
| | ಬ) ಆರೋಗ್ಯವಂತ ಶಿಶುಗಳ ಪ್ರದರ್ಶನ ಕಾರ್ಯಕ್ರಮ | 5205 | 1712 |
| | ಕ) ಮಹಿಳಾ ವಿಚಾರ ವಿನಿಮಯ | 1205 | 0498 |
| | ಡ) ಮ. ಆ. ಸಂಘದ ಸದಸ್ಯರ ಸಭೆಗಳು | 3615 | 1250 |
| | ಇ) - " - ಗ್ರಾಮೀಣ ತರಬೇತಿ ಕಾರ್ಯಕ್ರಮ | 1205 | 0415 |
| | ಫ) - " - ತಾಲ್ಲೂಕು ಮಟ್ಟದ ಕಾರ್ಯಕ್ರಮ | 50 | 0015 |
| | ಗ) - " - ಜಿಲ್ಲಾ ಮಟ್ಟದ ಕಾರ್ಯಾಗಾರ | 20 | 0014 |
| | | 170 | 0038 |
| 2. | **ಜಂಟಿ ತರಬೇತಿ ಕಾರ್ಯಕ್ರಮ :** | | |
| 3. | **ಸಮೂಹ ಶಿಕ್ಷಣ ಕಾರ್ಯಕ್ರಮ :** | | |
| | ಅ) ಗ್ರಾಮ ಪಂಚಾಯ್ತಿ ಸದಸ್ಯರ ತರಬೇತಿ ಕಾರ್ಯಕ್ರಮ | 1280 | 0203 |
| | ಬ) ಜನಪದ ಕಾರ್ಯಕ್ರಮ | 1200 | 0644 |
| | ಕ) ಪಿಯುಸಿ ವಿದ್ಯಾರ್ಥಿಗಳ ಚರ್ಚಾಕೂಟ | 100 | 0040 |
| | ಡ) ಚಲನಚಿತ್ರ ಪ್ರದರ್ಶನ | 4800 | 3893 |
| | ಇ) ಬಹುಮಾಧ್ಯಮ ವಿಶೇಷ ಪ್ರಚಾರ ಆಂದೋಳನ | - | 16 |



F-3

| | | |
|---|---|---|
| ಫ) ವಸ್ತು ಪ್ರದರ್ಶನ | 4800 | 34227 |
| ಗ) ವಿಶ್ವ ಜನಸಂಖ್ಯಾ ದಿನಾಚರಣೆ | 21 | 21 |
| ಹ) ಪತ್ರಿಕಾ ಜಾಹೀರಾತು | - | 52 |
| ಐ) ಪತ್ರಿಕಾ ಬಿಡುಗಡೆ | - | 890 |
| **4. ಪ್ರಕಟಣೆ** | | |
| ಅ) ಕುಟುಂಬ ಕಲ್ಯಾಣ ಪಾಕ್ಷಿಕ ಭಿತ್ತಿ ಪತ್ರ | 6.00.000 | 2.50.000 |
| ಬ) ಭಿತ್ತಿ ಪತ್ರ | 1.00.000 | - |
| ಕ) ಮಡಿಕೆ ಪತ್ರ | 1.00.000 | - |
| ಡ) ಛಾಯಾ ಚಿತ್ರದ ಮಡಿಕೆ | 10.000 | - |
| ಇ) ಸಚಿತ್ರ ಮಾಹಿತಿ ಕೈಪಿಡಿ (ಅಕುಕ) | 20.000 | 20.000 |
| ಫ) ಕಿರು ಪುಸ್ತಕ | 20.000 | - |
| **5. ಶ್ರವಣ ವೀಕ್ಷಣ ಸಲಕರಣೆಗಳು** | | |
| ಅ) ವಿಡಿಯೋ ಫಿಲ್ಮ್ | 3 | 3 |
| ಬ) ಅಡಿಯೋ ಕ್ಯಾಸೆಟ್ಸ್ | 1.000 | 1.000 |
| ಕ) ವಿ. ಹೆಚ್.ಎಸ್. ಪ್ರತಿಗಳು | 200 | - |
| ಡ) ಟಿ. ವಿ. ಸ್ಪಾಟ್ಸ್ | 7 | 7 |

## ಅನುಬಂಧ – III

### ಕರ್ನಾಟಕ ರಾಜ್ಯದಲ್ಲಿ ವಿವಿಧ ಕುಟುಂಬ ಕಲ್ಯಾಣ ಯೋಜನೆಯ ವಿಧಾನದಿಂದ ರಕ್ಷಣೆಗೆ ಒಳಗಾದ ಅರ್ಹ ದಂಪತಿಗಳ ಜಿಲ್ಲಾವಾರು ಶೇಕಡಾ ಪ್ರಮಾಣ

| ಕ್ರ. ಸಂ. | ಜಿಲ್ಲೆ | 31.3.90 ರಲ್ಲಿದ್ದಂತೆ | 31.3.91 ರಲ್ಲಿದ್ದಂತೆ | 31.3.92 ರಲ್ಲಿದ್ದಂತೆ | 31.3.93 ರಲ್ಲಿದ್ದಂತೆ | 31.3.94 ರಲ್ಲಿದ್ದಂತೆ | ಸಂತಾನಹರಣ ಶಸ್ತ್ರಚಿಕಿತ್ಸೆಯ ದಂಪತಿಯ ರಕ್ಷಣ ದರದಂತೆ ಜನನ ದರ |
|---|---|---|---|---|---|---|---|
| 1. | ಬೆಂಗಳೂರು | 48.6 | 45.9 | 46.89 | 47.95 | 51.18 | 25.84 |
| 2. | ಬೆಂಗಳೂರು (ಗ್ರಾ) | 46.9 | 50.5 | 52.45 | 56.10 | 58.07 | 22.92 |
| 3. | ಚಿತ್ರದುರ್ಗ | 47.2 | 48.8 | 50.26 | 50.67 | 52.45 | 24.83 |
| 4. | ಕೋಲಾರ | 45.6 | 48.6 | 51.26 | 52.00 | 54.97 | 24.80 |
| 5. | ಶಿವಮೊಗ್ಗ | 49.9 | 56.3 | 57.83 | 58.98 | 60.92 | 22.47 |
| 6. | ತುಮಕೂರು | 47.1 | 50.3 | 50.06 | 51.36 | 53.41 | 24.64 |
| 7. | ಬೆಳಗಾವಿ | 41.6 | 45.6 | 47.84 | 47.99 | 50.51 | 25.41 |
| 8. | ಬಿಜಾಪುರ | 38.4 | 45.5 | 46.41 | 45.87 | 46.65 | 27.44 |
| 9. | ಧಾರವಾಡ | 41.7 | 45.5 | 47.52 | 49.10 | 51.87 | 25.10 |
| 10. | ಉತ್ತರ ಕನ್ನಡ | 36.4 | 40.1 | 41.56 | 42.62 | 43.92 | 28.70 |
| 11. | ಬಳ್ಳಾರಿ | 39.1 | 39.3 | 40.29 | 41.33 | 43.32 | 27.95 |
| 12. | ಬೀದರ್ | 43.6 | 45.0 | 46.87 | 47.62 | 50.10 | 26.31 |
| 13. | ಗುಲ್ಬರ್ಗಾ | 30.4 | 31.0 | 32.81 | 35.84 | 39.36 | 30.33 |
| 14. | ರಾಯಚೂರು | 36.3 | 34.7 | 35.88 | 37.13 | 38.14 | 30.39 |
| 15. | ಚಿಕ್ಕಮಗಳೂರು | 56.1 | 64.3 | 65.87 | 66.13 | 67.69 | 19.92 |
| 16. | ದಕ್ಷಿಣ ಕನ್ನಡ | 34.7 | 40.4 | 41.86 | 43.06 | 44.78 | 27.62 |
| 17. | ಹಾಸನ | 57.1 | 63.8 | 64.78 | 66.56 | 68.87 | 19.84 |
| 18. | ಕೊಡಗು | 51.7 | 60.9 | 62.92 | 63.36 | 63.85 | 21.85 |
| 19. | ಮಂಡ್ಯ | 56.5 | 63.7 | 65.59 | 68.47 | 70.52 | 19.19 |
| 20. | ಮೈಸೂರು | 56.2 | 60.2 | 63.04 | 63.52 | 64.98 | 21.36 |
| | ಜಿಲ್ಲಾ ಮೊತ್ತ | 44.5 | 47.6 | 49.13 | 50.25 | 52.40 | 25.29 |

ವಿ.ಸೂ.: ಶಸ್ತ್ರಚಿಕಿತ್ಸೆಯ ಅರ್ಹ ದಂಪತಿ ರಕ್ಷಣಾ ಪ್ರಮಾಣವನ್ನು ಅವಲಂಬಿಸಿ ಲೆಕ್ಕಾಚಾರ ಹಾಕಿರುವ ಜನನ ದರವು ಮಾದರಿ ದಾಖಲಾತಿ ಸಮೀಕ್ಷೆಯಲ್ಲಿ (ಎಸ್.ಆರ್.ಎಸ್) ಲೆಕ್ಕಾಚಾರ ಹಾಕಿರುವ ಜನನ ದರದೊಡನೆ ಸರಿಹೊಂದುವುದರಿಂದ ಇದನ್ನು ಗಣನೆಗೆ ತೆಗೆದುಕೊಳ್ಳಬಹುದು. ಅರ್ಹ ದಂಪತಿಗಳ ರಕ್ಷಣಾ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡು ಜನನ ದರ ಲೆಕ್ಕಾಚಾರ ಹಾಕಲಾಗಿ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಜನನ ದರವು ಹೆಚ್ಚಿಗೆ ಇರುತ್ತದೆ. ಆದರೆ ವಾಸ್ತವಿಕತೆಯಲ್ಲಿ ಅಧ್ಯಯನದ ವರದಿ ಪ್ರಕಾರ ಇವೆರಡು ಜಿಲ್ಲೆಯ ಜನನ ದರವು ಕಡಿಮೆ ಇರುತ್ತದೆ. ಅಂದರೆ ದಕ್ಷಿಣ ಕನ್ನಡ ಜಿಲ್ಲೆಯ ಜನನ ದರವು 23.0 (1987) ಮತ್ತು ಉತ್ತರ ಕನ್ನಡ ಜಿಲ್ಲೆಯ ದರವು 22.1 (1991) ಇರುತ್ತದೆ.

## ಅನುಬಂಧ - IV

2211 - ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕೆ 1994-95ನೇ ಸಾಲಿನ ಆಯವ್ಯಯ ಹಂಚಿಕೆ 31.12.94ರವರೆಗೆ ಆದ ವೆಚ್ಚ ಮತ್ತು 01:95 ರಿಂದ 03:95 ರವರೆಗೆ ಆಗಬಹುದಾದ ವೆಚ್ಚ, ಇವುಗಳ ವಿವರ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳು | ಅಯವ್ಯಯ ಹಂಚಿಕೆ | ವೆಚ್ಚ (ಎಂಎಂಆರ್ ಆಧಾರ) | 1:95 ರಿಂದ 3:95 ರವರೆಗೆ ಆಗಬಹುದಾದ ವೆಚ್ಚ |
|---|---|---|---|---|
| **1.** | **ಕೇಂದ್ರ ಪುರಸ್ಕೃತ ಯೋಜನೆ** | | | |
| 1. | ನಿರ್ದೇಶನ ಮತ್ತು ಆಡಳಿತ | 403.50 | 231.15 | 172.35 |
| 2. | ಗ್ರಾಮಾಂತರ ಕು.ಕ. ಸೇವೆಗಳು | 2488.10 | 1928.85 | 873.35 |
| 3. | ನಗರ ಕು.ಕ. ಸೇವೆಗಳು | 336.14 | 248.83 | 527.31 |
| 4. | ತಾಯಿ ಮತ್ತು ಮಕ್ಕಳ ಆರೋಗ್ಯ | 496.50 | 52.04 | 444.46 |
| 5. | ಸಾರಿಗೆ | 135.81 | 46.82 | 88.99 |
| 6. | ಪರಿಹಾರ | 1188.72 | 403.24 | 785.48 |
| 7. | ಇತರ ಸೇವೆಗಳು ಮತ್ತು ಸರಬರಾಜು | 764.76 | 4.27 | 5.73 |
| 8. | ಸಾಮೂಹಿಕ ಶಿಕ್ಷಣ | 73.87 | 27.76 | 46.11 |
| 9. | ತರಬೇತಿ | 287.56 | 120.51 | 167.55 |
| 10. | ಭಾರತ ಜನಸಂಖ್ಯಾ ಯೋಜನೆ - 8 | 100.00 | - | 100.00 |
| 11. | ಭಾರತ ಜನಸಂಖ್ಯಾ ಯೋಜನೆ - 9 | 1980.00 | - | 1980.00 |
| | ಮೊತ್ತ | 8254.96 | 3063.47 | 5191.49 |
| **2.** | **ರಾಜ್ಯ ಸರ್ಕಾರದ ನಿಧಿ (ಯೋಜನೆ ಮತ್ತು ಯೋಜನೇತರ)** | | | |
| 12. | ಯೋಜನೆ | 608.69 | 102.39 | 506.30 |
| 13. | ಯೋಜನೇತರ | 444.50 | 350.00 | 94.50 |
| | ಒಟ್ಟು ಮೊತ್ತ | 9308.15 | 3515.86 | 5792.29 |

# ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ

**1. ಪೀಠಿಕೆ :**

ಈ ರಾಜ್ಯದಲ್ಲಿ ಕುಷ್ಠರೋಗವು ಒಂದು ದೊಡ್ಡ ಸಾಮಾಜಿಕ ಮತ್ತು ಸಾರ್ವಜನಿಕ ಆರೋಗ್ಯ ಸಮಸ್ಯೆಯಾಗಿದೆ. ಈಗಿನ ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ 1954-55ರಲ್ಲಿ ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮವಾಗಿ ಪ್ರಾರಂಭಿಸಲ್ಪಟ್ಟಿತ್ತು. ಈ ಕಾರ್ಯಕ್ರಮದ ಮುಖ್ಯ ಉದ್ದೇಶವು ರೋಗಿಗಳನ್ನು ಪ್ರಾರಂಭದಲ್ಲಿಯೇ ಪತ್ತೆ ಹಚ್ಚುವುದು ಹಾಗೂ ಎಲ್ಲಾ ರೋಗಿಗಳಿಗೂ ಕ್ರಮಬದ್ಧವಾಗಿ ಡ್ಯಾಪ್‌ಸೋನ್ ಮಾತ್ರೆಗಳಿಂದ ಚಿಕಿತ್ಸೆ ನೀಡುವುದು. ಈ ರೀತಿ ಮಾಡಲಾಗಿ ಕಾರ್ಯಕ್ರಮದಲ್ಲಿ ಅಡಚಣೆಗಳು ಉಂಟಾದವು. ಅವೆಂದರೆ ಚಿಕಿತ್ಸೆಯು ದೀರ್ಘಕಾಲವಾದುದರಿಂದ ಕ್ರಮ ತಪ್ಪಿದ ಚಿಕಿತ್ಸೆಯಾಗಿ ಔಷಧಿ ನಿರೋಧ ಸ್ಥಿತಿ ತಲುಪಿತು. (ಡ್ರಗ್ ರೆಸಿಸ್ಟೆಂಸ್)

ಈ ಅಡಚಣೆಗಳನ್ನು ಹೋಗಲಾಡಿಸಲು ಒಂದು ಸಾವಿರ ಜನಸಂಖ್ಯೆಗೆ ಐದು ಕುಷ್ಠರೋಗಿಗಳಿರುವ ಜಿಲ್ಲೆಗಳಲ್ಲಿ "ಭಾರತ ಸರ್ಕಾರದ ಆದೇಶದ ಮೇರೆಗೆ" 1982ರಿಂದ 'ಬಹು ಔಷಧಿ ಚಿಕಿತ್ಸಾ ಕಾರ್ಯಕ್ರಮ' ವನ್ನು ಜಾರಿಗೆ ತರಲಾಯಿತು.

**2. ಮುಖ್ಯ ಉದ್ದೇಶಗಳು :**

1) ಸೋಂಕುಳ್ಳ ರೋಗಿಗಳನ್ನು ಅತಿ ಕಡಿಮೆ ಅವಧಿಯಲ್ಲಿ ಸೋಂಕಿಲ್ಲದಂತೆ ಮಾಡುವುದು.

2) ಪ್ರಾರಂಭದಲ್ಲಿಯೇ ರೋಗಿಗಳನ್ನು ಪತ್ತೆಹಚ್ಚಿ ಕ್ರಮಬದ್ಧ ಚಿಕಿತ್ಸೆಯಿಂದ ಅಂಗವಿಕಲತೆಯನ್ನು ತಡೆಗಟ್ಟುವುದು.

3) ಸಮಾಜ ಕುಟುಂಬ ಹಾಗೂ ವ್ಯಕ್ತಿಗೆ ಆರೋಗ್ಯ ಶಿಕ್ಷಣ ಮೂಲಕ ಈ ರೋಗದ ಬಗ್ಗೆ ಇದ್ದ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ ರೋಗದ ಬಗ್ಗೆ ಸರಿಯಾದ ಮಾಹಿತಿ ನೀಡುವುದು.

4) ಗುಣಹೊಂದಿದ ಕುಷ್ಠರೋಗಿಗಳಿಗೆ ಪುನರ್ವಸತಿ ಕಲ್ಪಿಸುವುದು

5) ಕ್ರಿ.ಶ. 2000 ಇಸವಿಗೆ ಎಲ್ಲಾ ರೋಗಿಗಳನ್ನೂ ರೋಗದಿಂದ ವಿಮುಕ್ತಿಗೊಳಿಸುವುದು.

**3. ಗುರಿಯನ್ನು ಸಾಧಿಸಲು ಅನುಸರಿಸಿದ ಕ್ರಮಗಳು :**

1) ರೋಗಿಗಳನ್ನು ಪತ್ತೆಹಚ್ಚುವುದು : ರೋಗಿಗಳನ್ನು ಪತ್ತೆ ಹಚ್ಚಲು ತಪಶೀಲುವಾರು ಸಮೀಕ್ಷೆ. ಶಾಲಾ ಮಕ್ಕಳ ಸಮೀಕ್ಷೆ. ರೋಗಿಗಳ ಸಂಪರ್ಕಗಳ ಸಮೀಕ್ಷೆ. ತೀವ್ರ ಸಮೀಕ್ಷೆಗಳಿಂದ ಕಾಲಮಿತಿ ಅವಧಿಯಲ್ಲಿ ರೋಗಿಗಳನ್ನು ಪತ್ತೆ ಹಚ್ಚುವುದು.

2) ಕುಷ್ಠರೋಗದ ಬಗ್ಗೆ ಸರಿಯಾದ ಮಾಹಿತಿ ಮತ್ತು ಶಿಕ್ಷಣ ನೀಡುವುದರಿಂದ – ಸ್ವಯಂ ಪ್ರೇರಣೆಯಿಂದ ಬಂದು ನೋಂದಾಯಿಸಿಕೊಳ್ಳುತ್ತಾರೆ.

**4. ಚಿಕಿತ್ಸೆ :**

ಪತ್ತೆಹಚ್ಚಿದ ಎಲ್ಲಾ ರೋಗಿಗಳಿಗೂ ಅಲ್ಪಾವಧಿಯಲ್ಲಿ ಕ್ರಮಬದ್ಧ ಚಿಕಿತ್ಸೆ ನೀಡುವುದು.

**5. ರೋಗಿಯ ಚಿಕಿತ್ಸಾ ಕ್ರಮಬದ್ಧತೆ :**

ರೋಗಿಯು ಚಿಕಿತ್ಸೆ ಪಡೆಯುವ ಮುನ್ನಾ ಚಿಕಿತ್ಸಾ ಕೇಂದ್ರಕ್ಕೆ ಬರಲು ಆರೋಗ್ಯ ಶಿಕ್ಷಣ ನೀಡಿ ಮನವೊಲಿಸುವುದು.

**1) ಮೇಲ್ವಿಚಾರಣೆ :**

ರೋಗಿಯು ಔಷಧಿಯನ್ನು ಕ್ರಮವಾಗಿ ತೆಗೆದುಕೊಳ್ಳುತ್ತಿರುವ ಬಗ್ಗೆ ಖಚಿತ ಪಡಿಸಿಕೊಳ್ಳಲು ಆಗಾಗ ಮೂತ್ರ ಪರೀಕ್ಷೆ ಮಾಡುವುದು. ಕ್ರಮತಪ್ಪಿದಲ್ಲಿ ಆರೋಗ್ಯ ಶಿಕ್ಷಣ ನೀಡಿ ಕ್ರಮಬದ್ಧವಾಗಿ ಚಿಕಿತ್ಸೆ ತೆಗೆದುಕೊಳ್ಳಲು ಪ್ರೇರೇಪಿಸುವುದು.

**2) ಕ್ರಮಬದ್ಧ ಚಿಕಿತ್ಸೆ ಹೊಂದಿದವರ ಅನುಸರಣಾ ಕ್ರಮ :**

ಆರೋಗ್ಯ ಕಾರ್ಯಕರ್ತರಿಂದ ನೇರ ಚಟುವಟಿಕೆಗಳು. ಪತ್ರ ವ್ಯವಹಾರ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಕ್ರಮಬದ್ಧ ಚಿಕಿತ್ಸೆ ಹೊಂದಲು ಮನವೊಲಿಸುವುದು.

## ಕರ್ನಾಟಕ

ಕರ್ನಾಟಕವನ್ನು ಕಡಿಮೆ ಸಾಂದ್ರತೆಯ ಸೋಂಕುಳ್ಳ ರಾಜ್ಯವೆಂದು ಪರಿಗಣಿಸಲಾಗಿದೆ. 1986 ರಿಂದ ಬಹು ಔಷಧಿ ಚಿಕಿತ್ಸೆಯಿಂದ 2.94.924 ರೋಗಿಗಳನ್ನು ಗುಣಪಡಿಸಲಾಗಿದೆ. ಹಾಗೂ ಹಾಲಿ 23.611 ರೋಗಿಗಳು ಚಿಕಿತ್ಸೆ ಪಡೆಯುತ್ತಿದ್ದಾರೆ.

**1) ಕರ್ನಾಟಕ ರಾಜ್ಯದಲ್ಲಿ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿ ಸಿಬ್ಬಂದಿ ವರ್ಗದ ವಿವರಗಳು ಕೆಳಕಂಡಂತಿವೆ :**

| | | |
|---|---|---|
| ಜಂಟಿ ನಿರ್ದೇಶಕರು, ಕುಷ್ಠರೋಗ ಸಾಂಕ್ರಾಮಿಕ ಸಮೀಕ್ಷಾ ತಂಡ | - | 1 |
| ಮಾದರಿ ಮೌಲ್ಯಮಾಪನ ಘಟಕ | - | 4 |
| ಜಿಲ್ಲಾ ಕುಷ್ಠರೋಗ ಅಧಿಕಾರಿಗಳು | - | 18 |
| ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕೇಂದ್ರಗಳು | - | 31 |
| ಮಾರ್ಪಾಡಿತ ಕುಷ್ಠರೋಗ ಕೇಂದ್ರಗಳು | - | 14 |

| | | |
|---|---|---|
| ನಗರ ಕುಷ್ಠರೋಗ ಕೇಂದ್ರಗಳು | - | 49 |
| ಸಮೀಕ್ಷೆ, ಶಿಕ್ಷಣ ಹಾಗೂ ಚಿಕಿತ್ಸಾ ಘಟಕಗಳು | - | 675 |
| ತಾತ್ಕಾಲಿಕ ಶುಶ್ರೂಷಾ ವಾರ್ಡ್‌ಗಳು | - | 22 |
| ಕುಷ್ಠರೋಗ ತರಬೇತಿ ಕೇಂದ್ರಗಳು | - | 2 |
| ಕುಷ್ಠರೋಗ ಪುನರ್ವಸತಿ ಹಾಗೂ ಅಭಿವೃದ್ಧಿ ಕೇಂದ್ರಗಳು | - | 2 |

ಇದರ ಜೊತೆಗೆ 26 ಸ್ವಯಂಸೇವಾ ಸಂಸ್ಥೆಗಳು ಕುಷ್ಠರೋಗ ನಿರ್ಮೂಲನೆಗಾಗಿ ಕೆಲಸ ಮಾಡುತ್ತಿವೆ. ಇದರೊಂದಿಗೆ ರೋಗಿಗಳಿಗೆ 1,110 ಹಾಸಿಗೆಗಳ ಸೌಲಭ್ಯವಿದ್ದು, 410 ಹಾಸಿಗೆಗಳನ್ನು ಸ್ವಯಂಸೇವಾ ಸಂಸ್ಥೆಯವರು ಭಾರತ ಸರ್ಕಾರದ ಅನುದಾನದಿಂದ ನಡೆಸುತ್ತಿದ್ದಾರೆ. ದೊಡ್ಡವರಿಗೆ ಒಂದು ಹಾಸಿಗೆಗೆ ಒಂದು ತಿಂಗಳಿಗೆ 185.00 ಹಾಗೂ ಮಕ್ಕಳಿಗೆ ರೂ. 90.00 ರಂತೆ ಅನುದಾನವನ್ನು ನೀಡಲಾಗುತ್ತಿದೆ.

**2) 1994-95ನೇ ಸಾಲಿನ ವಾರ್ಷಿಕ ಗುರಿ ಮತ್ತು ಸಾಧನೆ :**

| | | ಗುರಿ | ಸಾಧನೆ | ಶೇಕಡಾವಾರು |
|---|---|---|---|---|
| 1. | ಪತ್ತೆಹಚ್ಚಿದ ಹೊಸ ರೋಗಿಗಳ ಸಂಖ್ಯೆ | 18,000 | 16,707 | 92.82 |
| 2. | ಗುಣ ಹೊಂದಿದವರು | 30,000 | 16,791 | 55.97 |

**3) ಬಹು ಔಷಧಿ ಚಿಕಿತ್ಸೆ :**

1986 ರಿಂದ 1992ರವರೆಗೆ ಆಧ್ಯತೆಯ ಮೇರೆಗೆ ಬಹು ಔಷಧಿಗಳ ಚಿಕಿತ್ಸಾ ಕಾರ್ಯಕ್ರಮವನ್ನು ವ್ಯವಸ್ಥಿತವಾಗಿ 10 ಜಿಲ್ಲೆಗಳಲ್ಲಿ ನಡೆಸಲಾಗುತ್ತಿದೆ.

ಪ್ರಾರಂಭದ ಹಂತದಲ್ಲಿ ರೋಗಿಗಳನ್ನು ಪತ್ತೆಹಚ್ಚಿ, ಕ್ರಮಬದ್ಧ ಚಿಕಿತ್ಸೆ ಮತ್ತು ಔಷಧಿಯನ್ನು ಸ್ವಯಂ ಪ್ರೇರಣೆಯಿಂದ ತೆಗೆದುಕೊಳ್ಳುವುದು. ಚಿಕಿತ್ಸೆಗೆ ತಪ್ಪಿಸಿಕೊಂಡವರನ್ನು ಹಿಂಬಾಲಿಸಿ ಕ್ರಮಬದ್ಧ ಚಿಕಿತ್ಸೆ ತೆಗೆದುಕೊಳ್ಳುವಂತೆ ಮನವೊಲಿಸಿರುವುದರಿಂದ ರಾಜ್ಯದಲ್ಲಿ ಶೇಕಡಾ 50 ಹಳ್ಳಿಗಳಲ್ಲಿ ಕುಷ್ಠರೋಗವಿಲ್ಲ. ಹಾಗೂ ಶೇ. 35 ರೋಗಿಗಳು ತಾವಾಗಿಯೇ ಬಂದು ನೋಂದಾಯಿಸಿಕೊಂಡು ಚಿಕಿತ್ಸೆ ಪಡೆಯುತ್ತಿದ್ದಾರೆ.

ಬಹು ಔಷಧಿ ಚಿಕಿತ್ಸೆ ಕಾರ್ಯಕ್ರಮವಿಲ್ಲದ ಪ್ರದೇಶಗಳಲ್ಲಿ ಸಮೀಕ್ಷೆ, ಶಿಕ್ಷಣ ಹಾಗೂ ಚಿಕಿತ್ಸಾ ಕೇಂದ್ರಗಳು ಹಾಗೂ ವೈದ್ಯಾಧಿಕಾರಿಗಳ ಮೇಲ್ವಿಚಾರಣೆಯ ಮೇಲೆ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೊಸ ರೋಗಿಗಳನ್ನು ಪತ್ತೆ ಹಚ್ಚಿ ಚಿಕಿತ್ಸೆಗೆ ಒಳಪಡಿಸಲಾಗುತ್ತಿದೆ. ಈ ಜಿಲ್ಲೆಗಳಲ್ಲಿ ಬಹು ಔಷಧಿಗಳ ಚಿಕಿತ್ಸಾ ಕಾರ್ಯಕ್ರಮವನ್ನು 1994-95ರಲ್ಲಿ ಜಾರಿಗೊಳಿಸಲಾಗುವುದು.

ಈ ಮೇಲಿನ ಕ್ರಮದಿಂದ ಸಮಾಜದಲ್ಲಿ ರೋಗದ ಬಗ್ಗೆ ಜಾಗ್ರತೆ ಹೆಚ್ಚಿರುವುದು ಕಂಡುಬರುತ್ತದೆ.

**4) ಕುಷ್ಠರೋಗಿಗಳ ಸಮೀಕ್ಷೆ ಕಾರ್ಯ :**

ಸಕ್ರಿಯ ಜಾಗರೂಕತೆ ಹಾಗೂ ಸ್ವಯಂ ಪ್ರೇರಣೆಯಿಂದ ಬರುತ್ತಿರುವ ರೋಗಿಗಳಲ್ಲದೇ ಕುಷ್ಠರೋಗ ಮೌಲ್ಯಮಾಪನ ಸಮೀಕ್ಷಾ ತಂಡ ಮತ್ತು ಕುಷ್ಠರೋಗ ಸಾಂಕ್ರಾಮಿಕ ಸಮೀಕ್ಷಾ ತಂಡಗಳೂ ಸಹ 1994-95ರಲ್ಲಿ 14 ಜಿಲ್ಲೆಗಳಲ್ಲಿ 365 ಹಳ್ಳಿಗಳಿಗೆ ಭೇಟಿ ನೀಡಿದೆ ಹಾಗೂ 195 ಶಾಲೆಗಳಿಗೆ ಭೇಟಿ ನೀಡಿ ಶಾಲಾ ಮಕ್ಕಳ ಸಮೀಕ್ಷೆ ನಡೆಸಿ 452 ಹೊಸ ರೋಗಿಗಳನ್ನು ಪತ್ತೆ ಹಚ್ಚಲಾಗಿದೆ.

**5) ಮೌಲ್ಯಮಾಪನ :**

1. ಕಾರ್ಯಕ್ರಮವನ್ನು ಮೌಲ್ಯಮಾಪನ ಮಾಡಲು ಮಾಸಿಕ ಹಾಗೂ ತ್ರೈಮಾಸಿಕ ಪರಿಶೀಲನಾ ಸಭೆಗಳನ್ನು ನಡೆಸಿ ಈ ಕಾರ್ಯಕ್ರಮದ ಚಟುವಟಿಕೆಗಳ ಮೌಲ್ಯಮಾಪನವನ್ನು ನಡೆಸಲಾಗುತ್ತಿದೆ.
2. **ಮೇಲ್ವಿಚಾರಣೆ :** ರಾಜ್ಯ ಕುಷ್ಠರೋಗಾಧಿಕಾರಿಗಳು, ಜಿಲ್ಲಾ ಕುಷ್ಠ ರೋಗಾಧಿಕಾರಿಗಳು, ವೈದ್ಯಾಧಿಕಾರಿಗಳು ಹಾಗೂ ವೈದ್ಯೇತರ ಮೇಲ್ವಿಚಾರಕರು ಇವರುಗಳು ಪದೇ ಪದೇ ಕ್ಷೇತ್ರ ವೀಕ್ಷಣೆ ಮಾಡುತ್ತಿದ್ದಾರೆ.
3. **ಸಲಹೆಗಾರರು :** ಭಾರತ ಸರ್ಕಾರದಿಂದ ನೇಮಿಸಲ್ಪಟ್ಟ ಸಲಹೆಗಾರರು ಈ ಕಾರ್ಯಕ್ರಮದ ಮೌಲ್ಯಮಾಪನ ಮಾಡಿ, ಸೂಕ್ತ ಸಲಹೆಗಳನ್ನು ನಿರ್ದೇಶಕರಿಗೂ ಹಾಗೂ ಜಿಲ್ಲಾ ಕುಷ್ಠರೋಗಾಧಿಕಾರಿಗಳಿಗೂ ನೀಡುತ್ತಿದ್ದಾರೆ.

**6) ತರಬೇತಿ :**

ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳ ವೈದ್ಯಾಧಿಕಾರಿಗಳು, ಹಿರಿಯ ಮತ್ತು ಕಿರಿಯ ವೈದ್ಯೇತರ ಮೇಲ್ವಿಚಾರಕರು, ಅರೆ ವೈದ್ಯಕೀಯ ಸಿಬ್ಬಂದಿಗಳು ಮತ್ತು ವಿವಿಧೋದ್ದೇಶ ಕಾರ್ಯಕರ್ತರುಗಳಿಗೆ ಮೂರು ದಿನಗಳ ಓರಿಯಂಟೇಷನ್ ತರಬೇತಿಯನ್ನು ನೀಡಲಾಗುತ್ತದೆ.

1994ರ ನವೆಂಬರ್ ಅಂತ್ಯದವರೆಗೆ ವಿವಿಧ ವರ್ಗಗಳ ಹುದ್ದೆಗಳವರೆಗೆ ನೀಡಿದ ಓರಿಯಂಟೇಷನ್ ತರಬೇತಿಯ ವಿವರಗಳು ಕೆಳಕಂಡಂತಿವೆ :

| | | | |
|---|---|---|---|
| 1` | ಪ್ರಾಥಮಿಕ ಆರೋಗ್ಯ ಕೇಂದ್ರ : ಪ್ರಾಥಮಿಕ ಆರೋಗ್ಯ ಘಟಕಗಳ ವೈದ್ಯಾಧಿಕಾರಿಗಳು | - | 1014 |
| 2) | ಅರೆ ವೈದ್ಯಕೀಯ ಸಿಬ್ಬಂದಿ ಮತ್ತು ವೈದ್ಯೇತರ ಮೇಲ್ವಿಚಾರಕರು (ಹಿರಿಯ ಮತ್ತು ಕಿರಿಯ) | - | 1539 |
| 3) | ವಿವಿಧೋದ್ದೇಶ ಕಾರ್ಯಕರ್ತರುಗಳು | - | 3217 |

**7) ಮಚ್ಚೆಗಳು :**

ಹೊಸದಾಗಿ ಪತ್ತೆಹಚ್ಚಿದ ರೋಗಿಗಳಲ್ಲಿ ಒಂದೇ ಒಂದು ಮಚ್ಚೆ ಇರುವ ರೋಗಿಗಳೇ ಹೆಚ್ಚಾಗಿ ಕಂಡುಬರುತ್ತಿದ್ದಾರೆ. ಇದರಿಂದ ಪ್ರಾರಂಭದಲ್ಲಿ ಗುರುತಿಸಿರುವ ರೋಗಿಗಳ ಸಂಖ್ಯೆ ಶೇಕಡ 50ರಷ್ಟು ಕಂಡುಬಂದಿದೆ.

| 8)ಆಯವ್ಯಯ 1994-95 | ನಗದು ರೂಪ | ವಸ್ತು ರೂಪ | ವೆಚ್ಚ |
|---|---|---|---|
| 1) ಕೇಂದ್ರ ಪುರಸ್ಕೃತ ಯೋಜನೆ | ರೂ. 100 ಲಕ್ಷ | ರೂ.105 ಲಕ್ಷ | ರೂ. 45.69 ಲಕ್ಷ |

| ತಾತ್ಕಾಲಿಕ ಅಯವ್ಯಯ : | ನಿಗದಿಪಡಿಸಿರುವುದು | ವೆಚ್ಚ |
|---|---|---|
| 2) ರಾಜ್ಯ ಯೋಜನೆಯಡಿ | ರೂ. 30 ಲಕ್ಷ | ರೂ. 16.70 ಲಕ್ಷ |

| ಯೋಜನೇತರ : | ನಿಗದಿಪಡಿಸಿರುವುದು | ವೆಚ್ಚ |
|---|---|---|
| ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ | ರೂ. 314.82 ಲಕ್ಷ | 99.33 ಲಕ್ಷ ರೂ.ಗಳು |

## ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮ

ಸಾಮಾನ್ಯ ಆರೋಗ್ಯ ಸೇವೆಯಲ್ಲಿಯೇ ಕ್ಷಯ ರೋಗ ಕಾರ್ಯಕ್ರಮವನ್ನು ಸಂಯೋಜಿಸಲಾಗಿದೆ.

ರಾಜ್ಯ ಕ್ಷಯರೋಗ ಕೇಂದ್ರವು ಕ್ಷಯರೋಗ ಕಾರ್ಯಕ್ರಮವನ್ನು ನಿಯೋಜಿಸುವುದು, ಕಾರ್ಯಗತಗೊಳಿಸುವುದು ಮತ್ತು ಕಾರ್ಯಕ್ರಮದ ಮೌಲ್ಯ ಮಾಪನವನ್ನು ನಡೆಸುತ್ತದೆ. ಈ ಕೇಂದ್ರದಲ್ಲಿ ಸೋಂಕು ಪರಿಶೀಲನಾ ವಿಭಾಗ. ಜೀವಾಣು ವಿಭಾಗ ಮತ್ತು ಸಂಶೋಧನಾ ವಿಭಾಗಗಳಿದ್ದು ಕಾರ್ಯನಿರ್ವಹಿಸುತ್ತಿವೆ.

ರಾಜ್ಯದಲ್ಲಿ ಎಲ್ಲಾ 20 ಜಿಲ್ಲೆಗಳಲ್ಲಿಯೂ ಕ್ಷಯರೋಗ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ.

### ಕಾರ್ಯಕ್ರಮದ ಉದ್ದೇಶ ಮತ್ತು ಅದನ್ನು ಅಳವಡಿಸುವ ವಿಧಾನ

1) ಸಾಮಾನ್ಯ ಆರೋಗ್ಯ ಸೇವಾ ಕೇಂದ್ರಗಳಲ್ಲಿ ಕ್ಷಯರೋಗವನ್ನು ಪತ್ತೆ ಹಚ್ಚಲು ಬೇಕಾಗುವ ಅನುಕೂಲಗಳನ್ನು ಕಲ್ಪಿಸುವುದು.

2) ಕ್ಷಯರೋಗ ಇರುವ ರೋಗಿಗೆ ನಿವಾಸದ ಹತ್ತಿರದಲ್ಲೇ ಔಷಧೋಪಚಾರ ಮಾಡುವುದು.

3) ಬಿ.ಸಿ.ಜಿ. ಚುಚ್ಚುಮದ್ದು ನೀಡುವ ಮೂಲಕ ಈ ರೋಗದ ಸೋಂಕಿನ

ಉಲ್ಬಣವನ್ನು ತಡೆಯುವುದು. ಈ ಕಾರ್ಯಕ್ರಮವನ್ನು ವಿಸ್ತೃತ ಲಸಿಕಾ ಕಾರ್ಯಕ್ರಮದಲ್ಲಿ ಸೇರಿಸಲಾಗಿದೆ.

4) ಈ ರೋಗದ ಬಗ್ಗೆ ರೋಗಿಗಳಿಗೆ ಎಲ್ಲಾ ವಿಧವಾದ ಮಾಹಿತಿಯನ್ನು ಕೊಡುವುದು ಮತ್ತು ರೋಗಿಯು ಚಿಕಿತ್ಸೆಯನ್ನು ಪೂರ್ಣ ಅವಧಿ ತೆಗೆದುಕೊಳ್ಳಲು ತಿಳಿಸುವುದು.

5) ಕ್ಷ-ಕಿರಣ ಮತ್ತು ಕಫ ಪರೀಕ್ಷೆಯಿಂದ ಕ್ಷಯರೋಗವನ್ನು ಕಂಡುಹಿಡಿದು ಸರಿಯಾದ ಚಿಕಿತ್ಸೆಯನ್ನು ಮಾಡುವುದು ಮತ್ತು ಎದೆಗೂಡು ಮತ್ತು ಇತರ ಕ್ಷಯರೋಗವನ್ನು ಸಹ ಪತ್ತೆ ಹಚ್ಚಿ ಸೂಕ್ತ ಚಿಕಿತ್ಸೆ ಮಾಡುವುದು.

6) ಎದೆಗೂಡಿನ ಕಾಯಿಲೆ ಲಕ್ಷಣಗಳಿರುವವರನ್ನು ಕಫ ಪರೀಕ್ಷೆಗೆ ಒಳಪಡಿಸುವುದು.

7) ಎದೆಗೂಡಿನ ಕಾಯಿಲೆ ಲಕ್ಷಣಗಳಿರುವವರನ್ನು ಪತ್ತೆ ಹಚ್ಚುವುದು.

## ರಾಜ್ಯದಲ್ಲಿ ಕ್ಷಯರೋಗ ಕಾರ್ಯಕ್ರಮದಡಿಯಲ್ಲಿ ಪೂರ್ವಭಾವಿ ವ್ಯವಸ್ಥೆಗಳು

1) ಒಂದು ರಾಜ್ಯ ಕ್ಷಯರೋಗ ಕೇಂದ್ರ. ಬೆಂಗಳೂರು

2) ಇಪ್ಪತ್ತು ಜಿಲ್ಲಾ ಕ್ಷಯರೋಗ ಕೇಂದ್ರಗಳು.

3) ಐದು ಹೆಚ್ಚುವರಿ ಕ್ಷಯರೋಗ ಕೇಂದ್ರಗಳು. ಸಿರ್ಸಿ. ಕಾರವಾರ ಜಿಲ್ಲೆ. ದಾವಣಗೆರೆ. ಚಿತ್ರದುರ್ಗ ಜಿಲ್ಲೆ. ಶಿರಾ. ತುಮಕೂರು ಜಿಲ್ಲೆ. ಹೊಸಪೇಟೆ. ಬಳ್ಳಾರಿ ಜಿಲ್ಲೆ. ಕೊಪ್ಪಳ, ರಾಯಚೂರು ಜಿಲ್ಲ.

4) ಹತ್ತು ಸರ್ಕಾರಿ ಕ್ಷಯರೋಗ ಮತ್ತು ಎದೆಗೂಡಿನ ಕಾಯಿಲೆ ಆಸ್ಪತ್ರೆಗಳು.

5) ಸರ್ಕಾರಿ ಆಸ್ಪತ್ರೆಗಳಲ್ಲಿ ಒಂದು ಸಾವಿರದ ಆರು ನೂರ ಎಪ್ಪತ್ತೆಂಟು ಕ್ಷಯ ರೋಗಿಗಳ ಹಾಸಿಗೆಗಳು.

6) ಆರು ನೂರ ತೊಂಭತ್ತು ಸೂಕ್ಷ್ಮದರ್ಶಕ ಕೇಂದ್ರಗಳು.

7) ಒಂದು ಸಾವಿರದ ಇಪ್ಪತ್ತಮೂರು ಪರಾಮರ್ಶಕ ಕೇಂದ್ರಗಳು.

8) ಒಂದು ನೂರ ಐವತ್ತೆರಡು ಕ್ಷ - ಕಿರಣ ಕೇಂದ್ರಗಳು

9) ಒಂದು ಅನುಪಾಲನಾ ಮತ್ತು ಪುನರ್ವಸತಿ ಕೇಂದ್ರ. ಬೆಂಗಳೂರು.

10) ಕಡಿಮೆ ಅವಧಿಯ ಚಿಕಿತ್ಸೆಯ ಸೌಲಭ್ಯವನ್ನು ಎಲ್ಲಾ ಜಿಲ್ಲೆಗಳಿಗೂ ಒದಗಿಸಲಾಗಿದೆ.

ರಾಜ್ಯ ಕ್ಷಯರೋಗ ಕೇಂದ್ರದಲ್ಲಿ 1994-95ನೇ ಸಾಲಿನಲ್ಲಿ ವೈದ್ಯಕೀಯ ಮತ್ತು ಅರೆ ವೈದ್ಯಕೀಯ ಸಿಬ್ಬಂದಿಗಳಿಗೆ ನೀಡಿದ ತರಬೇತಿ ವಿವರ ಈ ಕೆಳಕಂಡಂತಿದೆ.

| | | | |
|---|---|---|---|
| 1) | ಹೌಸ್ ಸರ್ಜನ್‌ಗಳು | - | 195 |
| 2) | ಅಂತಿಮ ವರ್ಷದ ವಿದ್ಯಾರ್ಥಿಗಳು | - | 162 |
| 3) | ವೈದ್ಯಾಧಿಕಾರಿಗಳು | - | 21 |
| 4) | ಕಿರಿಯ ಆರೋಗ್ಯ ಸಹಾಯಕರು | - | 71 |
| 5) | ನರ್ಸಿಂಗ್ ವಿದ್ಯಾರ್ಥಿಗಳು | - | 90 |
| 6) | ಎಂಟನೇ ಸೆಮಿಸ್ಟರ್ ವಿದ್ಯಾರ್ಥಿಗಳು | - | 117 |
| 7) | ಆರೋಗ್ಯ ಸಹಾಯಕರು (ಮ) | - | 31 |
| 8) | ಶುಶ್ರೂಷಕ ದಾದಿಯರು | - | 1 |
| 9) | ಜಿಲ್ಲಾ ಕ್ಷಯರೋಗಾಧಿಕಾರಿಗಳಿಗೆ ಪನರ್ಮನನ ಶಿಬಿರ | - | 17 |
| 10) | ಸಾಂಖ್ಯಿಕ ಸಹಾಯಕರು | - | 1 |
| 11) | ಬೆಂಗಳೂರು ಮಹಾ ನಗರಪಾಲಿಕೆ (ಮೈಕ್ರೋಸ್ಕೋಪಿಕ್) | - | 1 |

ಭೌತಿಕ ಪ್ರಗತಿ

1994-95 ನೇ ಸಾಲಿನ ಗುರಿ ಮತ್ತು ಸಾಧನೆ (ಡಿಸೆಂಬರ್ 94ರ ಅಂತ್ಯದವರೆಗೆ)

| ಹೊಸ ರೋಗಿಗಳನ್ನು ಪತ್ತೆಹಚ್ಚುವುದು | | | ಕಫ ಪರೀಕ್ಷೆ ಮಾಡುವುದು | | |
|---|---|---|---|---|---|
| ಗುರಿ | ಸಾಧನೆ | ಶೇಕಡ | ಗುರಿ | ಸಾಧನೆ | ಶೇಕಡಾ |
| 90.000 | 57.922 | 64.36 | 1.85.500 | 1.47.875 | 79.72 |

ಆರ್ಥಿಕ ಪ್ರಗತಿ

1994-95ನೇ ಸಾಲಿನ ಅನುದಾನ ಮತ್ತು ವೆಚ್ಚ (ಡಿಸೆಂಬರ್ 94ರ ಅಂತ್ಯದವರೆಗೆ)

(ಲಕ್ಷ ರೂ. ಗಳಲ್ಲಿ)

| ಕೇಂದ್ರ ಸರ್ಕಾರ | | ರಾಜ್ಯ ಸರ್ಕಾರ | | | |
|---|---|---|---|---|---|
| ನಿಗದಿಪಡಿಸಿರುವ ಅನುದಾನ | ವೆಚ್ಚ | ಯೋಜನೆ | | ಯೋಜನೇತರ (ಲೇವಿರಾಕ್ಷ ಕೇಂದ್ರದ್ದು ಮಾತ್ರ) | |
| | | ನಿಗದಿಪಡಿಸಿರುವ ಅನುದಾನ | ವೆಚ್ಚ | ನಿಗದಿಪಡಿಸಿರುವ ಅನುದಾನ | ವೆಚ್ಚ |
| 154 | ವಸ್ತು ರೂಪದಲ್ಲಿ ಅಂದರೆ. ಔಷಧಿ, ರಾಸಾಯನಿಕ ವಸ್ತುಗಳು, ಕ್ಷ-ಕಿರಣ ಯಂತ್ರಗಳು, ಕ್ಷ-ಕಿರಣ ಪಟಗಳು, ಓಡಿಲ್ಯಾ ಕ್ಯಾಮರಾಗಳು ಇವುಗಳನ್ನು 95ರ ಮಾರ್ಚ್ ಅಂತ್ಯದಲ್ಲಿ ಸರಬರಾಜು ಮಾಡಲಾಗುವುದು. | 185.00 | 10.42 | 59.63 | 36.05 |

# ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮವು 1976ರಲ್ಲಿ ಕೇಂದ್ರ ಸರ್ಕಾರದ ನೆರವಿನಿಂದ ಪ್ರಾರಂಭವಾಯಿತು.

**ಉದ್ದೇಶ :**

ಹಾಲಿ ಇರುವ ಕುರುಡುತನವನ್ನು ಶೇಕಡಾ 1.4 ರಿಂದ 2000ನೇ ಇಸವಿಗೆ ಶೇಕಡಾ 0.3 ಕ್ಕೆ ಇಳಿಸುವ ಗುರಿ ಹೊಂದಿದೆ. ಕಣ್ಣಿನ ಪೊರೆಯಿಂದ ಉಂಟಾಗುವ ಕುರುಡುತನವು ಶೇಕಡಾ 82ರಷ್ಟು ಇದೆ. ಕರ್ನಾಟಕ ಜನಸಂಖ್ಯೆಯು ಸುಮಾರು 4.5 ಕೋಟಿಯಷ್ಟಿದ್ದು, ಅಂಧರ ಸಂಖ್ಯೆಯನ್ನು 4.5 ಲಕ್ಷವೆಂದು ಅಂದಾಜು ಮಾಡಲಾಗಿದೆ. ಕರ್ನಾಟಕದಲ್ಲಿ ಅಂಧತ್ವದ ಪ್ರಮಾಣವು ಶೇಕಡಾ 1.29ರಷ್ಟಿದೆ. ಅಂಧತ್ವ ತಡೆಯುವಲ್ಲಿ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

1) ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಯೋಜನೆ. ಮೇಲ್ವಿಚಾರಣೆ ಹಾಗೂ ಮೌಲ್ಯಮಾಪನ ಮಾಡಲು ರಾಜ್ಯಮಟ್ಟದಲ್ಲಿ ಒಂದು ನೇತ್ರ ವಿಭಾಗವನ್ನು ತೆರೆಯಲಾಗಿದೆ.

2) ನೇತ್ರ ಚಿಕಿತ್ಸೆಯಲ್ಲಿ ಮುಂದುವರಿದ ತಂತ್ರಜ್ಞಾನ ನೀಡಲು ಬೆಂಗಳೂರಿನ ಮಿಂಟೋ ಆಸ್ಪತ್ರೆಯನ್ನು ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆಯಾಗಿ ಮೇಲ್ದರ್ಜೆಗೇರಿಸಲಾಗಿದೆ.

3) ಕೆಳಕಂಡ ವೈದ್ಯಕೀಯ ಕಾಲೇಜುಗಳಲ್ಲಿ ತಜ್ಞ ನೇತ್ರ ಚಿಕಿತ್ಸೆ ದೊರೆಯುವಂತೆ ಮೇಲ್ದರ್ಜೆಗೇರಿಸಲಾಗಿದೆ.

   1. ಜೆ.ಜೆ.ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ.
   2. ಜೆಎನ್. ವೈದ್ಯಕೀಯ ಕಾಲೇಜು, ಬೆಳಗಾವಿ
   3. ಕರ್ನಾಟಕ ವೈದ್ಯಕೀಯ ಮಹಾ ವಿದ್ಯಾಲಯ. ಹುಬ್ಬಳ್ಳಿ.
   4. ಮೈಸೂರು ವೈದ್ಯಕೀಯ ಮಹಾ ವಿದ್ಯಾಲಯ. ಮೈಸೂರು.

4) ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ನೇತ್ರ ಚಿಕಿತ್ಸೆಯ ಸೌಲಭ್ಯವನ್ನು ಕಲ್ಪಿಸುವ ವ್ಯವಸ್ಥೆ ಮಾಡಲಾಗಿದೆ.

5) ನಾಲ್ಕು ಕಂದಾಯ ವಿಭಾಗದಲ್ಲಿ ನಾಲ್ಕು ಸಂಚಾರಿ ವಿಭಾಗೀಯ ನೇತ್ರ ಚಿಕಿತ್ಸಾ ಘಟಕಗಳು ಕಾರ್ಯನಿರ್ವಹಿಸುತ್ತಿರುತ್ತವೆ.

6) ದಾವಣಗೆರೆ. ಚಿಕ್ಕಮಗಳೂರು. ಬಿಜಾಪುರ. ರಾಯಚೂರು. ಕಾರವಾರ. ಹಾಸನ. ತುಮಕೂರು. ಶಿವಮೊಗ್ಗ. ಧಾರವಾಡ. ಮಂಗಳೂರು. ಮಂಡ್ಯ. ಬೀದರ್.

ಕೋಲಾರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 14 ಜಿಲ್ಲಾ ಸಂಚಾರಿ ನೇತ್ರ ಘಟಕಗಳನ್ನು ಸ್ಥಾಪಿಸಲಾಗಿದೆ.

7) 376 ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಒಂದು ನೇತ್ರ ಸಹಾಯಕರ ಹುದ್ದೆಯಂತೆ ಹುದ್ದೆಗಳನ್ನು ಸೃಷ್ಟಿಸಿ ಅಭಿವೃದ್ಧಿ ಪಡಿಸಲಾಗಿದೆ.

8) ಮಿಂಟೋ ಕಣ್ಣಾಸ್ಪತ್ರೆ. ಬೆಂಗಳೂರು. ಕೃಷ್ಣರಾಜೇಂದ್ರ ಆಸ್ಪತ್ರೆ. ಮೈಸೂರು ಮತ್ತು ಜಿಲ್ಲಾ ಆಸ್ಪತ್ರೆ. ಬೆಳಗಾವಿಯಲ್ಲಿ ಕಣ್ಣಿನ ಕಸಿ ಶಸ್ತ್ರಚಿಕಿತ್ಸೆಯನ್ನು ನೀಡಲು ನೇತ್ರ ಬ್ಯಾಂಕ್‌ಗಳನ್ನು ಸ್ಥಾಪಿಸಲಾಗಿದೆ.

9) ಡ್ಯಾನಿಡಾ ಇಂಟರ್ ನ್ಯಾಷನಲ್ ಅಭಿವೃದ್ಧಿ ತುಮಕೂರು ಜಿಲ್ಲೆಯನ್ನು ಪ್ರಾಯೋಗಿಕ ಯೋಜನೆಗಾಗಿ ಅಳವಡಿಸಿಕೊಂಡಿದ್ದು. ಈ ಯೋಜನೆಯಿಂದ ಉತ್ತಮ ಪ್ರಗತಿ ಸಾಧಿಸಲಾಗಿದೆ. ಡ್ಯಾನಿಡಾ ಸಂಸ್ಥೆಯವರು ಈ ಪ್ರಾಯೋಗಿಕ ಯೋಜನೆಯನ್ನು ಹಂತ ಹಂತವಾಗಿ ರಾಜ್ಯಾದ್ಯಂತ ವಿಸ್ತರಿಸಲು ಮುಂದೆ ಬಂದಿರುವುದು.

1989ರಿಂದ ಈ ಯೋಜನೆಯಡಿಯಲ್ಲಿ ಉಪಕರಣಗಳು. ಔಷಧಿಗಳು ಮತ್ತು ವಾಹನಗಳನ್ನು ಸರಬರಾಜು ಮಾಡಲಾಗಿದೆ.

10) ಡ್ಯಾನಿಡಾ ಯೋಜನೆಯಡಿಯಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಅಂಧತ್ವ ನಿಯಂತ್ರಣ ಸೊಸೈಟಿಗಳನ್ನು ಸ್ಥಾಪಿಸಲಾಗಿದೆ.

ಈ ಸೊಸೈಟಿಗಳಿಗೆ ಬೇಕಾದ ಹಣದ ಸವಲತ್ತನ್ನು "ಡ್ಯಾನಿಡಾ"ದವರು ಒದಗಿಸುತ್ತಾರೆ.

## ಈ ಕಾರ್ಯಕ್ರಮದ ಭೌತಿಕ ಗುರಿ ಮತ್ತು ಸಾಧನೆ

ಈ ಕೆಳಕಂಡ ಪಟ್ಟಿಯು ಪೊರೆ ಶಸ್ತ್ರಚಿಕಿತ್ಸೆಯ ಗುರಿ, ಸಾಧನೆ ಹಾಗೂ ಶೇಕಡಾವಾರು ಪ್ರಮಾಣವನ್ನು ತೋರಿಸುತ್ತದೆ.

| ವರ್ಷ | ಗುರಿ | ಸಾಧನೆ | ಶೇಕಡಾವಾರು |
|---|---|---|---|
| 1994-95 | 1,40,000 | 1,04,684 (ಡಿಸೆಂಬರ್ 94ರ ಅಂತ್ಯದವರೆಗೆ) | 74.79 |

1994-95ನೇ ಸಾಲಿಗೆ ಬಿಡುಗಡೆಯಾದ ಅನುದಾನ ಮತ್ತು ವೆಚ್ಚ

(ಲಕ್ಷ ರೂ. ಗಳಲ್ಲಿ)

| | ಬಿಡುಗಡೆಯಾದ ಅನುದಾನ | ವೆಚ್ಚ |
|---|---|---|
| ಕೇಂದ್ರ ಸರ್ಕಾರ | 76.96 | 25.75 |
| ರಾಜ್ಯ ಸರ್ಕಾರ | 30.00 | 15.48 |

## ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ

ರಾಷ್ಟ್ರೀಯ ಮಲೇರಿಯಾ ಕಾರ್ಯಕ್ರಮದ ಮುಖ್ಯ ಉದ್ದೇಶವೇನೆಂದರೆ. ಮಲೇರಿಯಾ ರೋಗದಿಂದ ಉಂಟಾಗುವ ಸಾವು ನೋವುಗಳನ್ನು ತಡೆಗಟ್ಟುವುದು ಹಾಗೂ ಮಲೇರಿಯಾ ಪ್ರಕರಣಗಳನ್ನು ಸಾರ್ವಜನಿಕ ಆರೋಗ್ಯಕ್ಕೆ ಧಕ್ಕೆಯಾಗದಷ್ಟು ಪ್ರಮಾಣಕ್ಕೆ ಇಳಿಸುವುದು.

ಈ ಕಾರ್ಯಕ್ರಮದಲ್ಲಿನ ಮುಖ್ಯ ನಿಯಂತ್ರಣ ಹಂತಗಳು ಈ ಕೆಳಕಂಡಂತಿವೆ :

**ಪ್ರಾಥಮಿಕ ನಿಯಂತ್ರಣ ಹಂತ :**

1) ಸಕ್ರಿಯ ಹಾಗೂ ಸ್ಥಿರ ರಕ್ತ ಲೇಪನ ಸಮೀಕ್ಷೆ

2) ರೋಗ ಪತ್ತೆ ಕಾರ್ಯ

3) ತೀವ್ರ ಚಿಕಿತ್ಸೆ

**ದ್ವಿತೀಯ ನಿಯಂತ್ರಣ ಹಂತ :**

1) ಕೀಟನಾಶಕ ಸಿಂಪಡಣೆ

2) ಜೈವಿಕ ಪರಿಸರ ನಿಯಂತ್ರಣ

ಕರ್ನಾಟಕ ರಾಜ್ಯದ ಸಾರ್ವಜನಿಕ ಆರೋಗ್ಯ ಅಧಿನಿಯಮದಂತೆ "ಮಲೇರಿಯಾ" ರೋಗವನ್ನು "ಪ್ರಕಟಿತ ರೋಗ" ಎಂದು ಪ್ರಕಟಿಸಲಾಗಿದೆ.

**ಆಡಳಿತ ವ್ಯವಸ್ಥೆ :**

ಈ ಕಾರ್ಯಕ್ರಮವು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಮನ್ವಯದಿಂದ ಶೇ. 50.50

ರಂತೆ ನಿರ್ದಿಷ್ಟ್ನು ಭರಿಸಿ. ಅನುಷ್ಠಾನಗೊಳಿಸಲಾಗುತ್ತಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು. ಈ ಕಾರ್ಯಕ್ರಮದ ಮುಖ್ಯಸ್ಥರಾಗಿರುತ್ತಾರೆ. ಜಂಟಿ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ). ಇವರು ಕಾರ್ಯಕ್ರಮದ ಮುಖ್ಯಾಧಿಕಾರಿಯಾಗಿದ್ದು. ರಾಜ್ಯದಲ್ಲಿ ಇದರ ಅನುಷ್ಠಾನಕ್ಕೆ ಎಲ್ಲಾ ರೀತಿಯಲ್ಲೂ ಜವಾಬ್ದಾರಿ ಹೊಂದಿರುತ್ತಾರೆ. ಇವರಿಗೆ ತಾಂತ್ರಿಕ ಸಹಾಯಕರಾಗಿ ಕೇಂದ್ರಸ್ಥಾನದಲ್ಲಿ ಉಪ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ).ಹಿರಿಯ ಕೀಟ ಶಾಸ್ತ್ರಜ್ಞರು ಮತ್ತು ವೈಜ್ಞಾನಿಕ ಅಧಿಕಾರಿಗಳು ಕಾರ್ಯಕ್ರಮ ವನ್ನು ಅನುಷ್ಠಾನಗೊಳಿಸಲು ಸಹಾಯ ಮಾಡುತ್ತಾರೆ.

ನಾಲ್ಕುವಿಭಾಗೀಯ ಮಟ್ಟದಲ್ಲಿ ಪ್ರತಿಯೊಂದು ವಿಭಾಗಕ್ಕೆ ಒಬ್ಬ ಉಪನಿರ್ದೇಶಕರನ್ನು ಹಾಗೂ ಕೀಟ ಶಾಸ್ತ್ರಜ್ಞರು ಮತ್ತು ಹಿರಿಯ ತಂತ್ರಜ್ಞರುಗಳನ್ನು ಮೇಲ್ವಿಚಾರಕರಾಗಿ ನೇಮಿಸಲಾಗಿದೆ. ರಾಜ್ಯದ 19 ಜಿಲ್ಲೆಗಳಲ್ಲಿ (ಕೊಡಗು ಜಿಲ್ಲೆಯ ಹೊರತು) ಪ್ರತಿ ಜಿಲ್ಲೆಗೆ ಒಬ್ಬ ಜಿಲ್ಲಾ ಮಲೇರಿಯಾಧಿಕಾರಿ ಇದ್ದು. ಇವರು ಕ್ಷೇತ್ರ ಮೇಲ್ವಿಚಾರಕರು ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳ ಸಹಾಯದಿಂದ ಕಾರ್ಯಕ್ರಮವನ್ನು ಅನುಷ್ಠಾನ ಗೊಳಿಸಲು ಜವಾಬ್ದಾರರಾಗಿರುತ್ತಾರೆ. ಪ್ರಾಥಮಿಕ ಆರೋಗ್ಯ ಕೇಂದ್ರದ ಹಿರಿಯ ಆರೋಗ್ಯ ಸಹಾಯಕರು 15 ದಿನಗಳಿಗೊಮ್ಮೆ ಮತ್ತು ಕಿರಿಯ ಆರೋಗ್ಯ ಸಹಾಯಕರು ವಾರಕ್ಕೆ ಒಂದು ಬಾರಿ ಮನೆ. ಮನೆಗೆ ಭೇಟಿ ನೀಡಿ. ಜ್ವರಪೀಡಿತರಿಂದ ರಕ್ತ ಲೇಪನ ಸಂಗ್ರಹಣೆ. ಮಲೇರಿಯಾ ರೋಗ ಪೀಡಿತರಿಗೆ ತೀವ್ರ ಚಿಕಿತ್ಸೆ ಹಾಗೂ ಕೀಟನಾಶಕ ಸಿಂಪಡಣಾ ಕಾರ್ಯದಲ್ಲಿ ಸಂಪೂರ್ಣ ವಾಗಿ ನೆರವಾಗುತ್ತಾರೆ.

### 1) ಕಾರ್ಯಾಚರಣೆ :

1994-95ನೇ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 57.48.508 ರಕ್ತ ಲೇಪನಗಳನ್ನು ಜ್ವರಪೀಡಿತರಿಂದ ಸಂಗ್ರಹಿಸಿ. ಅವುಗಳಲ್ಲಿ 2.27.292 ಮಲೇರಿಯಾ ರೋಗ ಪ್ರಕರಣಗಳನ್ನು ಪತ್ತೆ ಹಚ್ಚಲಾಯಿತು. ಈ ಮೇಲಿರಿಯಾ ಪ್ರಕರಣಗಳಲ್ಲಿ 30.465 ಪ್ರಕರಣಗಳು ಮಾರಕ ವಾದ ಪಿ.ಎಫ್. ಜಾತಿಯ ಮಲೇರಿಯಾ ಪ್ರಕರಣಗಳು. ಮುಖ್ಯವಾಗಿ ಚಿಕ್ಕಮಗಳೂರು. ತುಮಕೂರು. ಹಾಸನ. ಚಿತ್ರದುರ್ಗ. ಕೋಲಾರ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಮಲೇರಿಯಾ ರೋಗವು ಉಲ್ಬಣಗೊಂಡಿರುತ್ತದೆ.

ಇದಕ್ಕೆ ಮುಖ್ಯ ಕಾರಣಗಳು ಈ ಕೆಳಕಂಡಂತಿವೆ :

1) ರೈಲ್ವೆ ಇಲಾಖೆ ಮಾನ್ಗೋಗೇಜ್ ಪರಿವರ್ತನಾ ಯೋಜನೆಯನ್ನು ಶೀಘ್ರವಾಗಿ ಕಾರ್ಯಗತಗೊಳಿಸುತ್ತಿರುವುದರಿಂದ ಏಪ್ರಿಲ್/ಮೇ 93 ರಿಂದ ಮಲೇರಿಯಾ ಪ್ರದೇಶಗಳಾದ ತಮಿಳುನಾಡು. ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಿಂದ ಕೂಲಿಕಾರರು ವಲಸೆ ಬಂದು. ರೋಗವಾಹಕ ಪ್ರದೇಶಗಳಲ್ಲಿ ನೆಲೆಯೂರಿರುವುದು.

2) 1130 ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳಲ್ಲಿ 747 ಹುದ್ದೆಗಳು ಖಾಲಿ ಇದ್ದು. ಇದರಿಂದ ಸಂಗ್ರಹಣೆಯಾದ ರಕ್ತಲೇಪನ ಪರೀಕ್ಷೆಯಲ್ಲಿ ವಿಳಂಬವಾದುದು.

ಭೌತಿಕ ಪ್ರಗತಿ :

| ವರ್ಷ | ಜನಸಂಖ್ಯೆ | ರಕ್ತಲೇಪನ ಪರೀಕ್ಷೆ | ಒಟ್ಟು ಮಲೇರಿಯಾ ಪ್ರಕರಣ | ಒಟ್ಟು ಪಿ. ಎಫ್ ಪ್ರಕರಣಗಳು |
|---|---|---|---|---|
| 1 | 2 | 3 | 4 | 5 |
| 1993-94 | 4,17,07,834 | 70,98,519 | 1,96,466 | 49,246 |
| 1994-95 | 4,17,07,834 | 57,48,508 | 2,27,292 | 30,465 |

| ವಾರ್ಷಿಕ ರಕ್ತ ಲೇಪನ ಪರೀಕ್ಷಾ ಪ್ರಮಾಣ | ವಾರ್ಷಿಕ ಪರಾವ ಲಂಬಿ ಸೂಚ್ಯಂಕ | ರಕ್ತಲೇಪನ ಪರಾವಲಂಬಿ ಪ್ರಮಾಣ | ರಕ್ತಲೇಪನ ಫಾಲ್ಸಿಫಾರಂ ಪ್ರಮಾಣ | ಶೇ. ತೀವ್ರ ಚಿಕಿತ್ಸೆ |
|---|---|---|---|---|
| 6 | 7 | 8 | 9 | 10 |
| 17.8 | 4.9 | 2.7 | 0.6 | 97.0 |
| 14.2 | 5.6 | 3.9 | 0.5 | 87.4 |

1992ರಲ್ಲಿ 81057 ರಷ್ಟಿದ್ದ ಮಲೇರಿಯಾ ಪ್ರಕರಣಗಳು 1993ರಲ್ಲಿ 1,96,466 ಇದ್ದು, ಇದು ಶೇ. 192ರಷ್ಟು ಹೆಚ್ಚಾಗಿದ್ದಿತು. ಪರಿಹಾರ ಕಾರ್ಯಗಳನ್ನು ಕೈಗೊಂಡ ಕಾರಣ 1994ರಲ್ಲಿ 2,27,292 ಪ್ರಕರಣಗಳಿದ್ದು ಶೇ. 15.6 ಮಾತ್ರ ಹೆಚ್ಚಾಗಿದೆ.

ಆರ್ಥಿಕ ಪ್ರಗತಿ

(ರೂ. ಲಕ್ಷಗಳಲ್ಲಿ)

| ವರ್ಷ | ಯೋಜನೆ | | | | ಯೋಜನೇತರ | |
|---|---|---|---|---|---|---|
| | ಒದಗಿಸಿರುವ ಅಯವ್ಯಯ | | ಖರ್ಚು | | ಒದಗಿಸಿರುವ ಆಯ ವ್ಯಯ | ಖರ್ಚು |
| | ರಾಜ್ಯ | ಕೇಂದ್ರ | ರಾಜ್ಯ | ಕೇಂದ್ರ | | |
| 1 | 2 | 3 | 4 | 5 | 6 | 7 |
| 1993-94 | 453.38 | 346.31 | 573.08 | 220.00 ಸರಬರಾಜು ವೆಚ್ಚ | 590.00 | 441.64 |
| 1994-95 (ಡಿಸೆಂಬರ್ 94ರ ಅಂತ್ಯದವರೆಗೆ) | 400.00 | 400.00 | 409.00 | 219.16 | 640.00 | 501.90 |

## ನಗರ ಮಲೇರಿಯಾ ಯೋಜನೆ

ಬೆಂಗಳೂರು, ಬಳ್ಳಾರಿ, ಬೆಳಗಾಂ, ಹೊಸಪೇಟೆ, ರಾಯಚೂರು, ಹಾಸನ, ತುಮಕೂರು ಮತ್ತು ಚಿಕ್ಕಮಗಳೂರು ನಗರಗಳಲ್ಲಿ ಈ ಯೋಜನೆಯು ಜಾರಿಯಲ್ಲಿ ಇದೆ. ಇದರ ಅನ್ವಯ ನಗರ ಪ್ರದೇಶಗಳಲ್ಲಿನ ಸೊಳ್ಳೆ ಉತ್ಪತ್ತಿ ಸ್ಥಾನಗಳಲ್ಲಿ ಕ್ರಿಮಿನಾಶಕ ಸಿಂಪಡಣೆಯನ್ನು ವಾರಕ್ಕೊಮ್ಮೆ ಪುರಸಭೆಯ ಸಿಬ್ಬಂದಿಯ ಮೂಲಕ ಸಿಂಪಡಣೆಯನ್ನು ಮಾಡಿ, ರೋಗವಾಹಕ ಸೊಳ್ಳೆಗಳ ಉತ್ಪತ್ತಿಯನ್ನು ನಿಯಂತ್ರಿಸಲಾಗುತ್ತಿದೆ. ಇದಲ್ಲದೆ, ಜೈವಿಕ ನಿಯಂತ್ರಣ ವಿಧಾನಗಳಾದ ಸಣ್ಣ ಕಾಮಗಾರಿ ಹಾಗೂ ಸೊಳ್ಳೆ ಮರಿಗಳನ್ನು ತಿಂದು ಜೀವಿಸುವ ಗ್ಯಾಂಬೋಸಿಯಾ ಗಪ್ಪಿ, ಮೀನುಗಳನ್ನು ನಿಂತ ನೀರಿನಲ್ಲಿ ಬೆಳೆಸುವುದು, ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

## ರಾಷ್ಟ್ರೀಯ ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮ

ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮವನ್ನು ರಾಜ್ಯದ ಗುಲ್ಬರ್ಗ, ಬೀದರ್, ಬಿಜಾಪುರ, ರಾಯಚೂರು, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲಾಗಿದೆ.

ಈ ಕಾರ್ಯಕ್ರಮದಡಿಯಲ್ಲಿ ಒಟ್ಟು 7 ಆನೆಕಾಲು ರೋಗ ನಿಯಂತ್ರಣ ಘಟಕಗಳು ಹಾಗೂ 24 ಆನೆಕಾಲು ರೋಗದ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿದೆ. ಇದಲ್ಲದೆ. ಒಂದು ಆನೇಕಾಲು ರೋಗ ಸಮೀಕ್ಷಾ ಘಟಕವನ್ನು ರಾಯಚೂರು ಜಿಲ್ಲೆಯಲ್ಲಿ ಸ್ಥಾಪಿಸಲಾಗಿದೆ.

**ಭೌತಿಕ ಪ್ರಗತಿ**

| ವರ್ಷ | ಪರೀಕ್ಷಿಸಲ್ಪಟ್ಟ ಜನರು | ಮೈಕ್ರೋಫಿಲೇರಿಯಾ ಪತ್ರೆ ಪ್ರಕರಣ | ರೋಗದ ಬಾಹ್ಯ ಲಕ್ಷವನ್ನುಳ್ಳವರ ಸಂಖ್ಯೆ | ಚಿಕಿತ್ಸೆ ನೀಡಿದ ಸಂಖ್ಯೆ |
|---|---|---|---|---|
| 1994-95 (ತಾತ್ಕಾಲಿಕ) | 1,41,581 | 907 | 3694 | 3699 |

## ಅತಿಸಾರರೋಗ ಮತ್ತು ಸಾಂಕ್ರಾಮಿಕ ರೋಗ ನಿಯಂತ್ರಣ ಕಾರ್ಯಕ್ರಮ

**ಪೀಠಿಕೆ :**

ಸಾಂಕ್ರಾಮಿಕ ರೋಗಗಳಾದ ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮ, ಕರುಳುಬೇನೆ ಮತ್ತು ಕಾಲರಾ ನಿಯಂತ್ರಣ ಕಾರ್ಯಕ್ರಮ. ಮೆದುಳು ಜ್ವರ ನಿಯಂತ್ರಣ ಕಾರ್ಯಕ್ರಮ, ಮಂಗನ ಖಾಯಿಲೆ ನಿಯಂತ್ರಣ ಕಾರ್ಯಕ್ರಮ ಮತ್ತು ಇತರೆ ಸಾಂಕ್ರಾಮಿಕ ರೋಗಗಳ್ಳ ಖಾಯಿಲೆ. ವಿಷಮಶೀತ ಜ್ವರ ಮತ್ತು ಹಂದಿಗೋಡು ಸಿಂಡ್ರೋಮಾ ಖಾಯಿಲೆ, ಮುಂತಾದ ಕಾರ್ಯಕ್ರಮಗಳನ್ನೊಳಗೊಂಡಿದೆ.

### ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮ (ಕೇಂದ್ರ ಪುರಸ್ಕೃತ ಯೋಜನೆ)

ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮವು ಕರ್ನಾಟಕ ರಾಜ್ಯದಲ್ಲಿ 1981-82ರ ಸಾಲಿನಲ್ಲಿ 50:50 ಪ್ರಮಾಣದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ವತಿಯಿಂದ ಪ್ರಾರಂಭವಾಯಿತು. ರಾಜ್ಯದ 20 ಜಿಲ್ಲೆಗಳ ಪೈಕಿ, 8 ಜಿಲ್ಲೆಗಳು ಎಂದರೆ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ್, ಧಾರವಾಡ, ಉತ್ತರ ಕನ್ನಡ, ಬೆಳಗಾವಿ ಮತ್ತು ಬಿಜಾಪುರ ರೋಗಗ್ರಸ್ಥ ಜಿಲ್ಲೆಗಳಾಗಿದ್ದು, ಹಾಲಿ ನಾರು ಹುಣ್ಣು ಪ್ರಕರಣಗಳು ವಿಜಾಪುರ ಜಿಲ್ಲೆಯಲ್ಲಿ ಮಾತ್ರ ವರದಿಯಾಗಿರುತ್ತದೆ.

ಈ ಕಾರ್ಯಕ್ರಮದ ಮುಖ್ಯ ಉದ್ದೇಶಗಳು ಈ ಕೆಳಕಂಡಂತಿರುತ್ತವೆ :

1) ಗ್ರಾಮಾಂತರ ಮಟ್ಟದಲ್ಲಿ ಶೂನ್ಯ ಪ್ರಕರಣವನ್ನು ಸಾಧಿಸಲು ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು.

2) ರೋಗವಿರುವ ಗ್ರಾಮದಲ್ಲಿನ ಸುರಕ್ಷಿತವಲ್ಲದ ಕುಡಿಯುವ ನೀರಿನ ಮೂಲಗಳನ್ನು ಗುರುತಿಸುವುದು.

3) ಸುರಕ್ಷಿತವಲ್ಲದ ನೀರಿನ ಮೂಲಗಳನ್ನು ಟೆಮೋಫಾಸ್‌ನಿಂದ ಶುದ್ಧಗೊಳಿಸುವುದು.

4) ರೋಗಿಗಳಿಗೆ ಹುಣ್ಣು ಮುಚ್ಚುವ ಪಟ್ಟಿಗಳನ್ನು ಒದಗಿಸುವುದು.

5) ರೋಗ ಪ್ರಭಾವ ಬೀರಿದ ಪ್ರದೇಶಗಳಲ್ಲಿ ಪ್ರಕರಣಗಳ ಮೇಲ್ವಿಚಾರಣೆಗೆ ಸಾಕಷ್ಟು ನಿಗಾ ವಹಿಸುವುದು.

6) ಆರೋಗ್ಯ ಶಿಕ್ಷಣ ಕಾರ್ಯಚಟುವಟಿಕೆಯನ್ನು ಚುರುಕುಗೊಳಿಸುವುದು.

**ಭೌತಿಕ ಪ್ರಗತಿ :**

1994-95ನೇ ಸಾಲಿನ ನಾರುಹುಣ್ಣು ಪ್ರಕರಣಗಳು ಈ ಕೆಳಕಂಡಂತೆ ಇವೆ.

| ಜಿಲ್ಲೆಯ ಹೆಸರು | ನಾರುಹುಣ್ಣು ಕಂಡು ಬಂದ ಗ್ರಾಮಗಳ ಸಂಖ್ಯೆ | ನಾರುಹುಣ್ಣು ಪ್ರಕರಣಗಳು |
|---|---|---|
| ವಿಜಾಪುರ | 2 | 2 |

**ಆರ್ಥಿಕ ಪ್ರಗತಿ :**

| ವರ್ಷ | ಅಯವ್ಯಯ ಬಿಡುಗಡೆ | ವೆಚ್ಚ |
|---|---|---|
| 1994-95 | ರೂ.6.00 ಲಕ್ಷಗಳು | ರೂ. 2.24 ಲಕ್ಷಗಳು |

**ಕರುಳುಬೇನೆ ಮತ್ತು ಕಾಲರಾ :**

ಕರ್ನಾಟಕ ರಾಜ್ಯದಲ್ಲಿ ಕರುಳುಬೇನೆ ಮತ್ತು ಕಾಲರಾ ರೋಗಗಳು ಎಲ್ಲಾ ಕಾಲದಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ರೋಗಗಳು. ಈ ಖಾಯಿಲೆಗಳನ್ನು ನಿಯಂತ್ರಿಸಲು ಕರ್ನಾಟಕ ಸರ್ಕಾರ 5 ಜಿಲ್ಲೆಗಳಲ್ಲಿ ಕಾಲರಾ ನಿಯಂತ್ರಣ ತಂಡಗಳನ್ನು ಮಂಜೂರು ಮಾಡಿದೆ. ಈ ತಂಡಗಳನ್ನು ಕರ್ನಾಟಕ ರಾಜ್ಯದಲ್ಲಿ ಗುಲ್ಬರ್ಗಾ ವಿಭಾಗದ ಗುಲ್ಬರ್ಗಾ, ಬಳ್ಳಾರಿ, ಬೆಳಗಾವಿ ವಿಭಾಗದ ವಿಜಾಪುರ, ಬೆಂಗಳೂರು ವಿಭಾಗದ ಚಿತ್ರದುರ್ಗ; ಮೈಸೂರು ವಿಭಾಗದ

ಮೈಸೂರುಗಳಲ್ಲಿ ಸೃಜಿಸಲಾಗಿದೆ. ಈ ನಿಯಂತ್ರಣ ತಂಡದಲ್ಲಿ ಒಬ್ಬ ವೈದ್ಯಾಧಿಕಾರಿ ಮತ್ತು ಇತರೇ ವೈದ್ಯೇತರ ಸಿಬ್ಬಂದಿಗಳನ್ನು ನಿಯುಕ್ತಿಸಿ. ರೋಗಗ್ರಸ್ತ ಸ್ಥಳಗಳಿಗೆ ಭೇಟಿ ಕೊಡಲು ವಾಹನವನ್ನು ಒದಗಿಸಲಾಗಿದೆ. ರೋಗಗಳು ಕಾಣಿಸಿಕೊಂಡ ಸಂದರ್ಭಗಳಲ್ಲಿ ಕಾಲರಾ ನಿಯಂತ್ರಣ ತಂಡಗಳು ಭೇಟಿ ಕೊಟ್ಟು ರೋಗ ನಿಯಂತ್ರಣ ಮತ್ತು ನಿವಾರಣಾ ಕ್ರಮಗಳನ್ನು ಕೈಗೊಳ್ಳುತ್ತವೆ.

ಅಕ್ಟೋಬರ್ ಮತ್ತು ನವೆಂಬರ್ 1994ರಲ್ಲಿ ಅತಿವೃಷ್ಠಿ ಮತ್ತು ಪ್ರವಾಹಗಳಿಂದ ಸಾಂಕ್ರಾಮಿಕ ರೋಗಗಳು ಗುಲ್ಬರ್ಗಾ. ಬೀದರ್. ವಿಜಾಪುರ. ಧಾರವಾಡ. ರಾಯಚೂರು. ಬೆಳಗಾವಿ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಾಲರಾ ಮತ್ತು ಕರುಳುಬೇನೆ ಪ್ರಕರಣಗಳು ವರದಿಯಾಗಿವೆ.

ಮುಂಜಾಗರೂಕತೆ ಕಾರ್ಯಕ್ರಮಗಳಾದ ಚೆಲುಮೆ ಪುಡಿಯಿಂದ ಕಲುಷಿತ ನೀರನ್ನು ಶುದ್ಧೀಕರಿಸುವುದು, ಕಾಲರಾ ಮತ್ತು ಅತಿಸಾರ ರೋಗಿಗಳಿಗೆ ಚಿಕಿತ್ಸೆ ನೀಡುವುದು, ಕಾಲರಾ ವಿರುದ್ಧ ಚುಚ್ಚುಮದ್ದು ನೀಡುವುದು, ಬಾಯಿ ಮೂಲಕ ನೀಡುವ ಪುನರ್ಜಲೀಕರಣ ಲವಣ ಪೊಟ್ಟಣಗಳ ಹಂಚಿಕೆ, ಮನೆಗಳಿಗೆ ಕ್ರಿಮಿನಾಶಕ ಸಿಂಪಡಣೆ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು.

ಆಕಾಶವಾಣಿ, ದೂರದರ್ಶನ, ಕರಪತ್ರ, ಪೋಸ್ಟರ್, ಮೈಕ್ರೋಫೋನು, ಮುಂತಾದವುಗಳ ಮೂಲಕ ಸಾರ್ವಜನಿಕರಿಗೆ ಆರೋಗ್ಯ ಶಿಕ್ಷಣವನ್ನು ನೀಡಲಾಯಿತು.

**ಭೌತಿಕ ಪ್ರಗತಿ :**

1994-95ನೇ ಸಾಲಿನಲ್ಲಿ ಕರುಳುಬೇನೆ ಮತ್ತು ಕಾಲರಾ ಪ್ರಕರಣಗಳು ಈ ಕೆಳಕಂಡಂತಿವೆ.

| ಕರುಳುಬೇನೆ | | ಕಾಲರಾ | | ಕಾಲರಾ ಚುಚ್ಚು |
|---|---|---|---|---|
| ಹರಡಿದ್ದು | ಮರಣ | ಹರಡಿದ್ದು | ಮರಣ | ಮದ್ದು ನೀಡಿದ್ದು |
| 15,932 | 325 | 304 | 10 | 8,52,565 |

**ಕಾಮಾಲೆ :**

ಈ ರೋಗವು ಅತಿಸಾರ ರೋಗಕ್ಕೆ ನೇರ ಸಂಬಂಧವಿರುವುದಿಲ್ಲ. ಆದರೆ ಇದು ನೀರು ಮತ್ತು ಆಹಾರದ ಮಲಿನತೆಯಿಂದ ಉಂಟಾಗುವ ಖಾಯಿಲೆಯಾಗಿರುತ್ತದೆ.

**1994-95ನೇ ಸಾಲಿನಲ್ಲಿ ಕಾಮಾಲೆ ಪ್ರಕರಣಗಳು ಈ ಕೆಳಕಂಡಂತೆ ಇವೆ**

| ಹರಡಿದ್ದು | ಮರಣ |
|---|---|
| 632 | 3 |

**ವಿಷಮಶೀತ ಜ್ವರ :**

ವಿಷಮಶೀತ ಜ್ವರವು ಸಾಂಕ್ರಾಮಿಕ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. 1994-95ನೇ ಸಾಲಿನಲ್ಲಿ ವಿಷಮಶೀತ ಜ್ವರದ ಪ್ರಕರಣಗಳು ಈ ಕೆಳಕಂಡಂತೆ ಇವೆ.

| ಪ್ರಕರಣಗಳು | ಮರಣ |
|---|---|
| 20,074 | -- |

ಮುಂಜಾಗ್ರತಾ ಕ್ರಮವಾಗಿ ಜ್ವರಪೀಡಿತ ಹಳ್ಳಿ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಚಲುಮೆ ಪುಡಿಯಿಂದ ನೀರಿನ ಶುದ್ಧೀಕರಣ ಮತ್ತು ಮನೆ ನೊಣ ನಿಯಂತ್ರಣ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು.

**ಆರ್ಥಿಕ ಪ್ರಗತಿ :**

ಅತಿಸಾರ ರೋಗ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ ಔಷಧಿ ಮತ್ತು ಕ್ರಿಮಿನಾಶಕ ಗಳನ್ನು ಖರೀದಿಸಿ ರೋಗಪೀಡಿತ ಜಿಲ್ಲೆಗಳಿಗೆ ಸರ್ಕಾರಿ ಔಷಧ ಮಳಿಗೆ ಮೂಲಕ ಒದಗಿಸಲು ರಾಜ್ಯ ಸರ್ಕಾರವು 10 ಲಕ್ಷ ರೂ. ಗಳನ್ನು ಒದಗಿಸಿದೆ.

| ವರ್ಷ | ಆಯವ್ಯಯ ಬಿಡುಗಡೆ | ವೆಚ್ಚ |
|---|---|---|
| 1994-95 | ರೂ. 10.00 ಲಕ್ಷ | ರೂ.10.00 ಲಕ್ಷ |

**ಮೆದುಳು ಜ್ವರ :**

ಈ ರೋಗವು ಸಾಮಾನ್ಯವಾಗಿ ತುಮಕೂರು, ಮಂಡ್ಯ. ಕೋಲಾರ. ಚಿತ್ರದುರ್ಗ. ರಾಯಚೂರು, ಬಳ್ಳಾರಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಕಂಡುಬಂದಿರುತ್ತದೆ.

**ಭೌತಿಕ ಪ್ರಗತಿ :**

1994-95ನೇ ಸಾಲಿನಲ್ಲಿ ಬಳ್ಳಾರಿ, ಕೋಲಾರ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಮಾತ್ರ ಮೆದುಳು ಜ್ವರದ ಪ್ರಕರಣಗಳು ವರದಿಯಾಗಿರುತ್ತವೆ.

| ಅನುಮಾನಾಸ್ಪದ ಪ್ರಕರಣಗಳು | | ದೃಢಪಟ್ಟ ಪ್ರಕರಣಗಳು | |
|---|---|---|---|
| ಹರಡಿದ್ದು | ಮರಣ | ಹರಡಿದ್ದು | ಮರಣ |
| 125 | 47 | 25 | 5 |

ಈ ಮೆದುಳು ಜ್ವರದ ಪ್ರಕರಣಗಳನ್ನು ಹತೋಟಿಗೆ ತರಲು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ರೋಗಿಗಳಿಗೆ ಚಿಕಿತ್ಸೆ ನೀಡಲು ಎಲ್ಲಾ ಸೌಕರ್ಯಗಳನ್ನು ಒದಗಿಸಲಾಗಿದೆ. ಮುಂಜಾಗ್ರತೆ

ಕ್ರಮವಾಗಿ ಸ್ಥಳೀಯ ಸಂಸ್ಥೆಗಳ ಸಹಾಯದಿಂದ ಹಂದಿಗಳನ್ನು ವಾಸಸ್ಥಳದಿಂದ ದೂರ ಸಾಗಿಸಲು ಕ್ರಮ ಕೈಗೊಳ್ಳಲಾಗಿದೆ.

**ಆರ್ಥಿಕ ಪ್ರಗತಿ :**

1994-95ನೇ ಸಾಲಿನಲ್ಲಿ ರಾಜ್ಯ ಸರ್ಕಾರವು ರೋಗಪೀಡಿತ ಜಿಲ್ಲೆಗಳಿಗೆ ಔಷಧಿ ಮತ್ತು ಕ್ರಿಮಿನಾಶಕಗಳನ್ನು ಖರೀದಿಸಿ ಸರ್ಕಾರಿ ಔಷಧಿ ಮಳಿಗೆ ಮೂಲಕ ಸರಬರಾಜು ಮಾಡಲು ಎರಡು ಲಕ್ಷ ರೂ. ಗಳನ್ನು ಒದಗಿಸಿದೆ.

| ಅಯವ್ಯಯ ಬಿಡುಗಡೆ (ಲಕ್ಷ ರೂ. ಗಳಲ್ಲಿ) | ವೆಚ್ಚ (ಲಕ್ಷ ರೂ. ಗಳಲ್ಲಿ) |
|---|---|
| 2.00 | 2.00 |

**ಕ್ಯಾಸನೂರು ಅರಣ್ಯ ಖಾಯಿಲೆ :**

ಈ ಖಾಯಿಲೆಯು ಶಿವಮೊಗ್ಗ, ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಸ್ಥಾನಿಕವಾಗಿರುತ್ತದೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಹೊಸನಗರ ಮತ್ತು ಸೊರಬ ತಾಲ್ಲೂಕುಗಳಲ್ಲಿಯೂ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಭಟ್ಕಳ, ಕುಮಟಾ, ಅಂಕೋಲಾ, ಸೂಪಾ ಮತ್ತು ಯಲ್ಲಾಪುರ ತಾಲ್ಲೂಕುಗಳಲ್ಲಿಯೂ, ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿಯೂ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನಲ್ಲಿಯೂ ಈ ರೋಗವು ಕಾಣಿಸಿಕೊಂಡಿರುತ್ತದೆ. ಶಿವಮೊಗ್ಗದ ಸೂಕ್ಷ್ಮಾಣು ಜೀವಿ ಸಂಶೋಧನಾ ಪ್ರಯೋಗಾಲಯವು ಎರಡು ಕ್ಷೇತ್ರ ಘಟಕಗಳ (ಸಾಗರ ಮತ್ತು ಹೊನ್ನಾವರ) ನೆರವಿನಿಂದ ಕಾರ್ಯ ನಿರ್ವಹಿಸುತ್ತಿದೆ.

ಇದಲ್ಲದೆ ಎರಡು ಕ್ಷೇತ್ರ ಘಟಕಗಳ ಸಿಬ್ಬಂದಿ ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯ ಕ್ಷೇತ್ರ ಸಿಬ್ಬಂದಿಯು ರೋಗವನ್ನು ಪತ್ತೆ ಹಚ್ಚುವುದು, ಚಿಕಿತ್ಸೆ ನೀಡುವುದು ಮತ್ತು ಮುಂಜಾಗರೂಕತಾ ಕ್ರಮಗಳಾದ ನಿಗಾವಣಾ ಕಾರ್ಯಚಟುವಟಿಕೆಗಳನ್ನು ನಡೆಸುತ್ತಿವೆ.

**ಭೌತಿಕ ಪ್ರಗತಿ :**

1994-95ನೇ ಸಾಲಿನಲ್ಲಿ ವರದಿಯಾದ ಕ್ಯಾಸನೂರು ಅರಣ್ಯ ಖಾಯಿಲೆ ಪ್ರಕರಣಗಳು ಈ ಕೆಳಕಂಡಂತಿರುತ್ತದೆ.

| ಅನುಮಾನಾಸ್ಪದ | | ಖಚಿತಗೊಂಡವು | |
|---|---|---|---|
| ಪ್ರಕರಣಗಳು | ಮರಣಗಳು | ಪ್ರಕರಣಗಳು | ಮರಣಗಳು |
| 110 | -- | 18 | -- |

ಶಿವಮೊಗ್ಗ ಸೂಕ್ಷ್ಮಾಣು ಜೀವಿ ಸಂಶೋಧನಾ ಪ್ರಯೋಗ ಶಾಲೆಯಲ್ಲಿ ಪರೀಕ್ಷೆಗೆ ಒಳಗೊಂಡ ಮಾದರಿಗಳ ಫಲಿತಾಂಶ.

**ರಕ್ತ ಮಾದರಿಗಳ ಪರೀಕ್ಷೆ**

| ಮಾದರಿ | ಯಿಂದ ಖಚಿತಗೊಂಡ ಪ್ರಕರಣಗಳು | | ಖಾಯಿಲೆ |
|---|---|---|---|
| | ಶೇಕರಿಸಿದ್ದು | ಪರೀಕ್ಷಿಸಿದ್ದು | ಸ್ಥಿರೀಕರಿಸಿದ್ದು |
| ಮಾನವ | 122 | 110 | 18 |
| ಮಂಗ | 21 | 21 | -- |
| ಒಟ್ಟು | 143 | 131 | 18 |

ಮಂಗನ ಖಾಯಿಲೆ ಪ್ರಾರಂಭಿಕವಾಗುವ ಪೂರ್ವಾವಧಿಯಲ್ಲಿ ಜಾನುವಾರುಗಳ ಮೇಲೆ ಕೀಟನಾಶಕಗಳ ಮುಖಾಂತರ ಉಣ್ಣೆ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಪಶುವೈದ್ಯ ಮತ್ತು ಪಶುಪಾಲನಾ ಇಲಾಖೆ ಇತರ ಇಲಾಖೆ ಮತ್ತು ಸ್ಥಳೀಯ ಜನರ ಸಹಕಾರದಿಂದ ಈ ಕಾರ್ಯಕ್ರಮವನ್ನು ಕೈಗೊಳ್ಳಲಾಗುತ್ತಿದೆ.

**ಹಂದಿಗೋಡು ಖಾಯಿಲೆ :**

ಈ ವಿಚಿತ್ರ ಖಾಯಿಲೆಯು ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯ ಗ್ರಾಮೀಣ ಹರಿಜನ ಕುಟುಂಬಗಳಲ್ಲಿ ಕಾಣಿಸಿಕೊಂಡಿರುತ್ತದೆ. ರೋಗಿಗಳು ವಿವಿಧ ಹಂತದ ಕೀಲುಗಳ ವಿಕೃತ ರೂಪದಿಂದ ನರಳುತ್ತಾರೆ.

ಈ ಪ್ರಕರಣಗಳಿಗೆ ಚಿಕಿತ್ಸೆಯನ್ನು ಅದರ ಲಕ್ಷಣಗಳಿಗೆ ಅನುಸಾರವಾಗಿ ಚಿಕಿತ್ಸೆ ನೀಡಲಾಗುತ್ತಿದೆ ಮತ್ತು ಪುನರ್ವಸತಿ ಕಾರ್ಯಗಳನ್ನು ಒದಗಿಸಲಾಗುತ್ತಿದೆ. ಐ.ಸಿ.ಎಂ.ಆರ್.ನ ಸಂಸ್ಥೆಯ ಸಿಬ್ಬಂದಿಯನ್ನು ಈ ಕಾರ್ಯಕ್ರಮದಲ್ಲಿ ಮುಂದುವರಿಸಲಾಗಿದೆ.

1994-95ನೇ ಸಾಲಿನಲ್ಲಿ ಮಂದಿಗೋಡು ಖಾಯಿಲೆಯಿಂದ ನರಳುತ್ತಿರುವ ರೋಗಿಗಳ ಅಂಕಿ ಅಂಶಗಳು ಈ ಕೆಳಗೆ ನಮೂದಿಸಲಾಗಿದೆ.

| ಕ್ರಂ. ಸಂಖ್ಯೆ | ಜಿಲ್ಲೆಗಳು | ಗ್ರಾಮಗಳು | ಪ್ರಕರಣಗಳ ಸಂಖ್ಯೆ |
|---|---|---|---|
| 1) | ಶಿವಮೊಗ್ಗ | 49 | 349 |
| 2) | ಚಿಕ್ಕಮಗಳೂರು | 30 | 262 |
| | ಒಟ್ಟು | 79 | 611 |

**ಪ್ಲೇಗ್ ರೋಗದ ವರದಿ :**

ಈ ಖಾಯಿಲೆಯು 1994ನೇ ಇಸವಿಯಲ್ಲಿ ಮೊದಲು ಗುಜರಾತ್‌ನಲ್ಲಿಯೂ, ಅನಂತರ ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿ ಸೆಪ್ಟಂಬರ್ ತಿಂಗಳ ಕೊನೆಯಲ್ಲಿ ಕಾಣಿಸಿಕೊಂಡಿತು. ಇದರ ಜಿಲ್ಲಾವಾರು ಅಂಕಿ ಅಂಶಗಳ ವರದಿ ಈ ರೀತಿ ಇರುತ್ತದೆ.

| ಕ್ರ.ಸಂ. | ಜಿಲ್ಲೆಗಳು | ಅನುಮಾನಾಸ್ಪದ | ಖಚಿತಪಟ್ಟಿದ್ದು |
|---|---|---|---|
| 1. | ಬೆಂಗಳೂರು ನಗರ | 143 | 29 |
| 2. | ತುಮಕೂರು | 10 | -- |
| 3. | ಕೋಲಾರ | 18 | 2 |
| 4. | ಶಿವಮೊಗ್ಗ | 1 | -- |
| 5. | ಚಿತ್ರದುರ್ಗ | 6 | 2 |
| 6. | ಬಳ್ಳಾರಿ | 29 | -- |
| 7. | ರಾಯಚೂರು | 1 | -- |
| 8. | ದಕ್ಷಿಣ ಕನ್ನಡ | 2 | -- |
| 9. | ಹಾಸನ | 3 | -- |
| 10. | ಕೊಡಗು | 5 | 1 |
| 11. | ಮಂಡ್ಯ | 131 | 5 |
| 12. | ಮೈಸೂರು ನಗರ | 37 | 11 |
| 13. | ಬೆಳಗಾಂ | 12 | -- |
| 14. | ಧಾರವಾಡ | 1 | 1 |
| | ಒಟ್ಟು | 399 | 51 |

ಪ್ಲೇಗ್ ಬಗ್ಗೆ ಸಾರ್ವಜನಿಕರಲ್ಲಿ ಆರೋಗ್ಯ ಶಿಕ್ಷಣವನ್ನು ಪ್ರಸಾರ ಮಾಧ್ಯಮಗಳಿಂದ ನೀಡಲಾಯಿತು. ಅಲ್ಲದೆ ಪರಿಸರವನ್ನು ಸ್ವಚ್ಛವಾಗಿಡಲು ಜನರಲ್ಲಿ ಮನವಿ ಮಾಡಿ ಕೊಳ್ಳಲಾಯಿತು. ಸತ್ತ ಇಲಿಗಳನ್ನು ಕೈಯಿಂದ ಮುಟ್ಟದೆ ಸೀಮೆಎಣ್ಣೆ ಹಾಕಿ ಸುಡಲು ತಿಳಿಸಲಾಯಿತು. ಇಂಥ ವಿಷಯಗಳನ್ನು ಪ್ರತಿದಿನವೂ ದೂರದರ್ಶನ ಹಾಗೂ ಆಕಾಶವಾಣಿ ಮೂಲಕ ಪ್ರಸಾರ ಮಾಡಲಾಯಿತು. ಈ ಬಗ್ಗೆ ವರದಿಯಾದ ಕಡೆಗಳಲ್ಲಿ ಬಿ.ಹೆಚ್.ಸಿ. ಯನ್ನು ಸಿಂಪಡಿಸಲಾಯಿತು. ಹಾಗೂ ಪ್ಲೇಗ್ ರೋಗಿಗಳನ್ನು ಆಸ್ಪತ್ರೆಯಲ್ಲಿ ದಾಖಲಿಸಿಕೊಂಡು ಚಿಕಿತ್ಸೆಯನ್ನು ನೀಡಲಾಯಿತು.

## ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮ

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದಲ್ಲಿ ಬರುವ ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿ ಮೇಲ್ವಿಚಾರಣೆ ಹಾಗೂ ಮಾರ್ಗದರ್ಶನ ನೀಡಲು ರಾಜ್ಯಮಟ್ಟದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ ರಾಜ್ಯದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ, ಭಾರತ ಸರ್ಕಾರ ಇವರ ಮಾರ್ಗ ಸೂಚಿಯಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮವು ಶೇಕಡಾ ನೂರರಷ್ಟು ಕೇಂದ್ರ ಪುರಸ್ಕೃತ ಯೋಜನೆಯಲ್ಲಿ ಬರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದ ವಿವಿಧ ಚಟುವಟಿಕೆಗಳ ಉಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ರಾಜ್ಯ ಏಡ್ಸ್ ಸೆಲ್ ಅನ್ನು ಮೇ 1992ರಲ್ಲಿ ಸ್ಥಾಪಿಸಲಾಯಿತು. ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣಾ ಕಾರ್ಯಕ್ರಮದಡಿಯಲ್ಲಿ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

**ಸರ್ವೆಲೆನ್ಸ್ ಮತ್ತು ಕ್ಲಿನಿಕಲ್ ಮ್ಯಾನೇಜ್‌ಮೆಂಟ್ :**

ರಾಜ್ಯದಲ್ಲಿ 3 ಏಡ್ಸ್ ಸರ್ವೆಲೆನ್ಸ್ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಈ ಕೇಂದ್ರಗಳು ಸರ್ವೆಲೆನ್ಸ್ ಮತ್ತು ಸೆಂಟನಲ್ ಸರ್ವೆಲೆನ್ಸ್ ಕಾರ್ಯ ಚಟುವಟಿಕೆಗಳನ್ನು ನಡೆಸುತ್ತವೆ.

**ರಕ್ತ ಸುರಕ್ಷತೆ ಕಾರ್ಯಕ್ರಮ :**

ರಾಜ್ಯದಲ್ಲಿ 9 ವಿಭಾಗೀಯ ರಕ್ತ ತಪಾಸಣೆ ಕೇಂದ್ರಗಳನ್ನು ಸ್ಥಾಪಿಸಲಾಗಿದೆ ಮತ್ತು ಅವು ಕಾರ್ಯನಿರ್ವಹಿಸುತ್ತಿವೆ. ಎಲ್ಲಾ ಸರ್ಕಾರಿ ರಕ್ತ ನಿಧಿ ಕೇಂದ್ರಗಳನ್ನು ಮತ್ತು ಖಾಸಗಿ ಮತ್ತು ಸ್ವಯಂಸೇವಾ ರಕ್ತನಿಧಿ ಕೇಂದ್ರಗಳನ್ನು ತಪಾಸಣೆ ಸಲುವಾಗಿ ವಿಭಾಗೀಯ ರಕ್ತ ತಪಾಸಣೆ ಕೇಂದ್ರಗಳಿಗೆ ಜೋಡಿಸಲಾಗಿದೆ. 1992-93ನೇ ಸಾಲಿನಲ್ಲಿ 6 ರಕ್ತನಿಧಿ ಕೇಂದ್ರಗಳನ್ನು ಆಧುನೀಕರಿಸಲಾಗಿದೆ. ಉಳಿದಿರುವ ರಕ್ತನಿಧಿ ಕೇಂದ್ರಗಳನ್ನು ಹಂತ ಹಂತವಾಗಿ 1994-95 ರಿಂದ ಆಧುನೀಕರಿಸಲಾಗುವುದು.

1994-95ನೇ ಸಾಲಿನಲ್ಲಿ ರಕ್ತ ಕಣ ವಿಭಜನಾ ಕೇಂದ್ರವನ್ನು ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ, ಬೆಂಗಳೂರಿನಲ್ಲಿ ಸ್ಥಾಪಿಸಲಾಗಿದೆ.

**ಲೈಂಗಿಕ ರೋಗ ನಿಯಂತ್ರಣ ಕಾರ್ಯಕ್ರಮ :**

ರಾಜ್ಯದಲ್ಲಿ ಸರ್ಕಾರಿ ಆಸ್ಪತ್ರೆಗಳಲ್ಲಿ ಒಟ್ಟು 24 ಲೈಂಗಿಕ ಚಿಕಿತ್ಸಾಲಯಗಳು ಇದ್ದು. ಅವುಗಳ ಸೇವೆಗಳನ್ನು. ಔಷಧಿ ಸಾಮಗ್ರಿಗಳನ್ನು ಮತ್ತು ಪ್ರಯೋಗಶಾಲೆ ಸಾಮಗ್ರಿಗಳನ್ನು ಹಾಗೂ ಸಲಕರಣೆಗಳನ್ನು ಒದಗಿಸಿ. ಬಲಪಡಿಸಲಾಗಿದೆ.

1987ರಿಂದ ನವೆಂಬರ್ 1994ರ ಅಂತ್ಯದವರೆಗೆ ಒಟ್ಟು 3.45.001 ರಕ್ತಮಾದರಿಗಳನ್ನು ಪರೀಕ್ಷಿಸಲಾಗಿದೆ. ಅವುಗಳಲ್ಲಿ 1.593 ಹೆಚ.ಐ.ವಿ. ಸೋಂಕು ತಗುಲಿರುವ ಪ್ರಕರಣಗಳನ್ನು ಪತ್ತೆ ಮಾಡಲಾಗಿದೆ. 26 ಜನರು ಸತ್ತಿರುತ್ತಾರೆ.

ಸೆಂಟಿನಲ್ ಸರ್ವೆಲೆನ್ಸ್ ಕಾರ್ಯಕ್ರಮವನ್ನು ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ ಇವರ ಮಾರ್ಗಸೂಚಿಯಲ್ಲಿ ವಿಕ್ಟೋರಿಯಾ ಆಸ್ಪತ್ರೆ. ಬೆಂಗಳೂರು ಮತ್ತು ಕರ್ನಾಟಕ ವೈದ್ಯಕೀಯ ಆಸ್ಪತ್ರೆ. ಹುಬ್ಬಳ್ಳಿ. ಇಲ್ಲಿ ನಡೆಸಲಾಗುತ್ತಿದೆ.

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆಯಿಂದ ಆರ್ಥಿಕ ಅನುದಾನ ಬಿಡುಗಡೆ ಮತ್ತು ವೆಚ್ಚದ ಮಾಹಿತಿ ಈ ಕೆಳಕಂಡಂತಿರುತ್ತದೆ.

(ರೂ. ಲಕ್ಷಗಳಲ್ಲಿ)

| ವರ್ಷ | ಬಿಡುಗಡೆಯಾದ ಹಣ | ಖರ್ಚು | ಉಳಿದ ಹಣ | ಷರಾ |
|---|---|---|---|---|
| 1993-94 | 1.21.062 | 74.868 | 46.194 | ಉಳಿದ ಹಣವನ್ನು 1994-95ನೇ ಸಾಲಿಗೆ ಉಪಯೋಗಿಸಿ ಕೊಳ್ಳಲು ಕ್ರಮ ಕೈಗೊಳ್ಳಲಾಗಿದೆ. |
| 1994-95 | 113.65 | 8.50 | 105.15 | |

## ಆರೋಗ್ಯ ಶಿಕ್ಷಣ ಮತ್ತು ತರಬೇತಿ

ಈ ನಿರ್ದೇಶನಾಲಯದಲ್ಲಿರುವ ಆರೋಗ್ಯ ಶಿಕ್ಷಣ ಮತ್ತು ತರಬೇತಿ ವಿಭಾಗವು ಸೇವಾ ನಿರತ ಹಾಗೂ ಸೇವಾ ಪೂರ್ವ ಮತ್ತು ಮೂಲ ತರಬೇತಿ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತದೆ. ಶ್ರವಣ. ವೀಕ್ಷಕ. ಆರೋಗ್ಯ ಶಿಕ್ಷಣಕ್ಕೆ ಬೇಕಾಗುವ ಉಪಕರಣಗಳ ಸಂಗ್ರಹಣೆ ಹಾಗೂ ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು ತಯಾರಿಸಿ. ಮುದ್ರಿಸಿ ಸರಬರಾಜು ಮಾಡುವುದು. ರಾಜ್ಯದಲ್ಲಿರುವ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿಗೆ ಶಾಲಾ ಆರೋಗ್ಯ ಸೇವಾ







ಸೌಲಭ್ಯಗಳನ್ನು ನೀಡುವುದು. ಮೈಸೂರು ದಸರಾದಂತಹ ದೊಡ್ಡ ವಸ್ತುಪ್ರದರ್ಶನಗಳಲ್ಲಿ ಆರೋಗ್ಯ ಮಳಿಗೆಯನ್ನು ತೆರೆಯುವುದು ಮತ್ತು ಜಾತ್ರೆ. ಉತ್ಸವಗಳಲ್ಲಿ ಹಾಗೂ ಇತರೆ ಸ್ಥಳಗಳಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಂದ ಆರೋಗ್ಯಕ್ಕೆ ಸಂಬಂಧಿಸಿದ ವಸ್ತು ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸುವುದು. ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಶಾಲಾ ಆರೋಗ್ಯ ಸೇವೆ ಒದಗಿಸುವುದು. ಆರೋಗ್ಯ ಶಿಕ್ಷಣ ನೀಡುವುದು. ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು ಆಯ್ದ ಕ್ಷೇತ್ರಗಳಲ್ಲಿ ಕ್ಷೇತ್ರ ಪರೀಕ್ಷೆ ನಡೆಸುವುದು. ಶಾಲಾ ಶಿಕ್ಷಕರಿಗೆ ತರಬೇತಿ ನೀಡುವುದು. ಮಾರ್ಗದರ್ಶನ ಮತ್ತು ಪ್ರಾತ್ಯಕ್ಷತೆಯನ್ನು ಆರೋಗ್ಯ ಕಾರ್ಯಕ್ರಮಗಳನ್ನು ಅಳವಡಿಸುವುದು.

**1994-95ನೇ ಸಾಲಿನ ಸಾಧನೆಗಳು (ಡಿಸೆಂಬರ್ 1994ರ ಅಂತ್ಯದವರೆಗೆ)**

1) ದಿನಾಂಕ 7-4-1994ರಂದು "ಆರೋಗ್ಯಕರ ಜೀವನಕ್ಕೆ ಬಾಯಿ ಮತ್ತು ಹಲ್ಲುಗಳ ಆರೋಗ್ಯ" ಎಂಬ ವಿಶ್ವ ಆರೋಗ್ಯ ದಿನಾಚರಣೆಯ ಘೋಷಣೆಯನ್ನು ಹೆಚ್ಚು ಉಪಯುಕ್ತ ರೀತಿಯಲ್ಲಿ ರಾಜ್ಯಮಟ್ಟ. ಜಿಲ್ಲಾಮಟ್ಟ ಮತ್ತು ಪ್ರಾಥಮಿಕ ಆರೋಗ್ಯಕೇಂದ್ರ ಮಟ್ಟಗಳಲ್ಲಿ ಆಚರಿಸಲಾಯಿತು.

**2) ವಸ್ತು ಪ್ರದರ್ಶನಗಳನ್ನು ಏರ್ಪಡಿಸಿದ್ದು :**

1994 ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಆರೋಗ್ಯ ಮಳಿಗೆಯನ್ನು ದಿನಾಂಕ 4-10-91ರಿಂದ 4-12-94 ರವರೆಗೆ ತೆರೆಯಲಾಗಿತ್ತು. ಈ ಪ್ರದರ್ಶನದಲ್ಲಿ ಇಲಾಖೆಯ ಬಹುತೇಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದ ಬಗೆಗಿನ ಮಾಹಿತಿಯನ್ನು ಪ್ರದರ್ಶಿಸಲಾಯಿತು.

ಹಾಸನದ ದನಗಳ ಜಾತ್ರೆಯಲ್ಲಿ ಡಿಸೆಂಬರ್ 94 ಮತ್ತು ಜನವರಿ 95ರಲ್ಲಿ ಆರೋಗ್ಯಕರ ಜೀವನಕ್ಕೆ ಬಾಯಿ ಮತ್ತು ಹಲ್ಲುಗಳ ಆರೋಗ್ಯ ಈ ವಿಚಾರವಾಗಿ ವಸ್ತು ಪ್ರದರ್ಶನ ಏರ್ಪಡಿಸಲಾಗಿತ್ತು.

**3) ಆರೋಗ್ಯ ಶಿಕ್ಷಣ ಸಾಮಗ್ರಿಗಳ ತಯಾರಿಕೆ :**

ಕಣ್ಣುದಾನ. ಅಂಧತ್ವ ನಿವಾರಣೆ. ಪ್ಲೇಗ್. ಕುಷ್ಠರೋಗ ನಿವಾರಣೆ. ನಾರುಹುಣ್ಣು ನಿವಾರಣೆ. ಗಳಗಂಡ ರೋಗ ಮತ್ತು ಪೌಷ್ಠಿಕ ಆಹಾರ ಮುಂತಾದ ವಿಷಯಗಳ ಬಗ್ಗೆ ಆರೋಗ್ಯ ಸಾಮಗ್ರಿಗಳಾದ ಭಿತ್ತಿಪತ್ರಗಳು. ಮಡಿಕೆ ಪತ್ರಗಳು ಮತ್ತು ಕರಪತ್ರಗಳನ್ನು ಕನ್ನಡ ಭಾಷೆ ಯಲ್ಲಿ ಹೊರತಂದು ಎಲ್ಲಾ ಜಿಲ್ಲೆಗಳಿಗೆ ಸರಬರಾಜು ಮಾಡಲಾಗಿದೆ.

ಆಹಾರ ಕಲಬೆರೆಕೆ. ಧೂಮಪಾನ. ವೈಯಕ್ತಿಕ ಆರೋಗ್ಯ. ಶಾಲಾ ಆರೋಗ್ಯ ಕಾರ್ಯಕ್ರಮ. ಕ್ಯಾಸನೂರು ಕಾಯಿಲೆ. ಮೆದುಳು ಜ್ವರ. ನೀರಿನಿಂದ ಬರುವ ಕಾಯಿಲೆಗಳು ಮುಂತಾದ ವಿಷಯಗಳ ಬಗ್ಗೆ ಆರೋಗ್ಯ ಶಿಕ್ಷಣ ಸಾಮಗ್ರಿಗಳಾದ ಪುಸ್ತಕಗಳು. ಭಿತ್ತಿಪತ್ರಗಳು. ಮಡಿಕೆ ಪತ್ರಗಳು. ಸ್ಟಿಕರ್‌ಗಳನ್ನು ಮುದ್ರಿಸಲು ಕ್ರಮ ತೆಗೆದುಕೊಳ್ಳಲಾಗಿದೆ.

(1) ನೀರಿನಿಂದ ಬರುವ ಕಾಯಿಲೆ (2) ಮೆದುಳು ಜ್ವರ (3) ರಾಷ್ಟ್ರೀಯ ಅಂಧತ್ವ ನಿವಾರಣ (4) ಫೈಲೇರಿಯಾ (5) ಕುಷ್ಠರೋಗ ನಿವಾರಣೆ ಮುಂತಾದ ವಿಷಯಗಳ ಬಗ್ಗೆ 15 ನಿಮಿಷಗಳ ಕಾಲಾವಧಿಯ ಯುವ್ಮ್ಯಾಟಿಕ್ ಬಣ್ಣದ ಕಿರುಚಿತ್ರಗಳನ್ನು ತಯಾರಿಸಲು ಕ್ರಮ ತೆಗೆದುಕೊಳ್ಳಲಾಗಿದೆ. ಬಾಯಿ ಮತ್ತು ಹಲ್ಲುಗಳ ಆರೋಗ್ಯ. ಕ್ಷಯರೋಗ ನಿಯಂತ್ರಣ ಮತ್ತು ಹುಂದಿಗೋಡು ಕಾಯಿಲೆಗಳ ಬಗ್ಗೆ 15 ನಿಮಿಷಗಳ ಅವಧಿಯ ವಿಡಿಯೋ ಫಿಲ್ಮ್ ಅನ್ನು ತಯಾರಿಸಲು ಪ್ರಸ್ತಾವನೆಯಲ್ಲಿದೆ.

**ತರಬೇತಿ ಕಾರ್ಯಕ್ರಮದ ಚಟುವಟಿಕೆಗಳು :**

1) ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿರುವ ವೈದ್ಯಕೀಯ ಮತ್ತು ಅರೆ ವೈದ್ಯಕೀಯ ಸಿಬ್ಬಂದಿ ವರ್ಗದವರಿಗೆ ಮುಂದುವರಿದ ಶಿಕ್ಷಣ ನೀಡಲಾಗುತ್ತಿದೆ.

ರಾಜ್ಯದಲ್ಲಿರುವ ಐದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ 1994-95ನೇ ಸಾಲಿನಲ್ಲಿ (ಡಿಸೆಂಬರ್ 94ರ ಅಂತ್ಯದವರೆಗೆ) 2 ವಾರಗಳ ಅವಧಿಯಲ್ಲಿ ಮುಂದುವರಿದ ಶಿಕ್ಷಣವನ್ನು ನೀಡಲಾಗುತ್ತಿದೆ.

| ಕ್ರ.ಸಂ. | ತರಬೇತಿ ವಿವರ | ತರಬೇತಿ ಪಡೆದವರ ಸಂಖ್ಯೆ |
|---|---|---|
| 1) | ವೈದ್ಯಾಧಿಕಾರಿಗಳು (ಪುರುಷರು) | 79 |
| 2) | ಮಹಿಳಾ ವೈದ್ಯಾಧಿಕಾರಿಗಳು | 39 |
| 3) | ಕ್ಷೇತ್ರ ಆರೋಗ್ಯ ಶಿಕ್ಷಕರು | 34 |
| 4) | ಪದವೀಧರರ ಕ್ಷೇತ್ರ ಆರೋಗ್ಯ ಶಿಕ್ಷಕರು "ಚೇತನ" ಕಾರ್ಯಕ್ರಮದಡಿಯಲ್ಲಿ | 31 |
| 5) | ಹಿರಿಯ ಆರೋಗ್ಯ ಸಹಾಯಕರು (ಪುರುಷರು) | 118 |
| 6) | ಹಿರಿಯ ಆರೋಗ್ಯ ಸಹಾಯಕರು (ಮಹಿಳೆಯರು) | 105 |
| 7) | ಕಿರಿಯ ಆರೋಗ್ಯ ಸಹಾಯಕರು (ಪುರುಷರು) (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ. ರಾಮನಗರ ಮತ್ತು ಗುಲ್ಬರ್ಗಾದಲ್ಲಿ ಮಾತ್ರ) | 69 |

| ಕ್ರ.ಸಂ. | ತರಬೇತಿ ವಿವರ | ತರಬೇತಿ ಪಡೆದವರ ಸಂಖ್ಯೆ |
|---|---|---|
| 8) | ಕಿರಿಯ ಆರೋಗ್ಯ ಸಹಾಯಕರು (ಮಹಿಳೆಯರು) (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ, ರಾಮನಗರ) | 52 |
| 9) | ಸಂಚಾರಿ ತರಬೇತಿ ತಂಡ. ಬೆಂಗಳೂರು. ಇವರಿಂದ ಹಿರಿಯ ಆರೋಗ್ಯ ಸಹಾಯಕರು (ಪುರುಷರು) ಮತ್ತು ಕಿರಿಯ ಆರೋಗ್ಯ ಸಹಾಯಕರು (ಮಹಿಳೆಯರು) ಇವರು ನೀಡಿದ ತರಬೇತಿ | 209 |
| 10) | ಕುಷ್ಠರೋಗ ತರಬೇತಿ ಕೇಂದ್ರ. ಬೆಂಗಳೂರು ಸಿಬ್ಬಂದಿ ವರ್ಗದವರಿಂದ ವೈದ್ಯಾಧಿಕಾರಿಗೆ 3 ದಿವಸಗಳ ಓರಿಯಂಟೇಷನ್ ತರಬೇತಿ ನೀಡಿದ್ದು | 277 |
| 11) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ. ಹುಬ್ಬಳ್ಳಿ, ಸಿಬ್ಬಂದಿ ವರ್ಗದವರಿಂದ ವೈದ್ಯಾಧಿಕಾರಿಗಳಿಗೆ 3 ದಿವಸಗಳ ಓರಿಯಂಟೇಷನ್ ತರಬೇತಿಯನ್ನು ನೀಡಿದ್ದು. | 199 |
| 12) | ಕುಷ್ಠರೋಗ ತರಬೇತಿ ಕೇಂದ್ರ. ಬೆಂಗಳೂರು ಸಿಬ್ಬಂದಿಯವರಿಂದ ವೈದ್ಯೇತರ ಮೇಲ್ವಿಚಾರಕರಿಗೆ ಓರಿಯಂಟೇಷನ್ ತರಬೇತಿ ನೀಡಿದ್ದು | 19 |
| 13) | ಕುಷ್ಠರೋಗ ತರಬೇತಿ ಕೇಂದ್ರ ಬೆಂಗಳೂರು, ಸಿಬ್ಬಂದಿಯವರಿಂದ ಅರೆ ವೈದ್ಯಕೀಯ ಸಿಬ್ಬಂದಿಯವರಿಗೆ ಒಂದು ದಿವಸ ಓರಿಯಂಟೇಷನ್ ತರಬೇತಿ ನೀಡಿದ್ದು | 72 |
| 14) | ಕುಷ್ಠರೋಗ ತರಬೇತಿ ಕೇಂದ್ರ. ಬೆಂಗಳೂರು ತಂಡದವರಿಂದ ಜಿಲ್ಲಾ ಕುಷ್ಠರೋಗ ಅಧಿಕಾರಿಗಳಿಗೆ ಮತ್ತು ವೈದ್ಯಾಧಿಕಾರಿಗಳಿಗೆ 7 ದಿವಸದ ಓರಿಯಂಟೇಷನ್ ತರಬೇತಿಯನ್ನು ನೀಡಿದ್ದು | 58 |
| 15) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ ಹುಬ್ಬಳ್ಳಿ ಸಿಬ್ಬಂದಿ ವರ್ಗದವರಿಂದ ಕ್ಷೇತ್ರ ಆರೋಗ್ಯ ಶಿಕ್ಷಕರಿಗೆ ಹಿರಿಯ (ಪುರುಷ) ಸಹಾಯಕರಿಗೆ ರಾಷ್ಟ್ರೀಯ ಕುಷ್ಠರೋಗ ನಿವಾರಣಾ ಕಾರ್ಯಕ್ರಮದ ಬಗ್ಗೆ 3 ದಿವಸದ ಓರಿಯಂಟೇಷನ್ ತರಬೇತಿಯನ್ನು ನೀಡಿದ್ದು | 219 |

2) ಮಲೇರಿಯಾ. ಫೈಲೇರಿಯಾ. ಕ್ಷಯ. ಪ್ಲೇಗ್ ನಿಯಂತ್ರಣ. ಸಾಂಕ್ರಾಮಿಕ ವಿಷ ವಿರುದ್ಧ ಔಷಧಿಗಳು. ದುರಭ್ಯಾಸ ಚಟದ ವಿರುದ್ಧ ಮಾನಸಿಕ ಆರೋಗ್ಯ ಮತ್ತು ಮುಖಂಡರ ತರಬೇತಿಗಾಗಿ ಒಟ್ಟು 99 ವೈದ್ಯಕೀಯ ಮತ್ತು 96 ಅರೆ ವೈದ್ಯಕೀಯ ವರ್ಗದವರನ್ನು ರಾಜ್ಯದೊಳಗೆ ಮತ್ತು ಹೊರ ರಾಜ್ಯಗಳಿಗೆ ತರಬೇತಿ ಪಡೆಯಲು / ಕಾರ್ಯಾಗಾರದಲ್ಲಿ ಭಾಗವಹಿಸಲು ನಿಯೋಜಿಸಲಾಗಿದೆ. 1994-95ನೇ ಸಾಲಿನಲ್ಲಿ ಸೌದಿ ಅರೇಬಿಯಾದಲ್ಲಿ ನಡೆಯುವ ಹಜ್ ಯಾತ್ರೆಯಲ್ಲಿ ಭಾಗವಹಿಸುವವರ ನೆರವಿಗಾಗಿ 4 ವೈದ್ಯರನ್ನು ನಿಯೋಜಿಸಲಾಗಿದೆ.

## ಶಾಲಾ ಆರೋಗ್ಯ ಕಾರ್ಯಕ್ರಮ

ಗ್ರಾಮೀಣ ಪ್ರದೇಶದಲ್ಲಿರುವ ಎಲ್ಲಾ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಾಲಾ ಆರೋಗ್ಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳನ್ನು ಕೋರಲಾಗಿದೆ. ವಿದ್ಯಾರ್ಥಿಗಳಿಗೆ ವೈದ್ಯಕೀಯ ಪರೀಕ್ಷೆ, ಡಿ.ಟಿ ಮತ್ತು ಟಿ.ಟಿ. ಯಂತಹ ಲಸಿಕೆ ಹಾಕುವುದು. ಸಣ್ಣಪುಟ್ಟ ಕಾಯಿಲೆಗಳಿಗೆ ಚಿಕಿತ್ಸೆ ನೀಡುವುದು ಮತ್ತು ವಿಶೇಷ ಚಿಕಿತ್ಸೆ ನೀಡಬೇಕಾದ ವಿದ್ಯಾರ್ಥಿಗಳನ್ನು ಹತ್ತಿರದ ಆಸ್ಪತ್ರೆಗಳಿಗೆ ಕಳುಹಿಸಿ ಕೊಡಲಾಗುವುದು, ಮುಂತಾದ ಕಾರ್ಯಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ವೈಯುಕ್ತಿಕ ಆರೋಗ್ಯ. ಪರಿಸರ ನೈರ್ಮಲ್ಯ. ಕುಡಿಯುವ ನೀರು, ಶೌಚಾಲಯಗಳ ಬಳಕೆ ಇತ್ಯಾದಿಗಳ ಬಗ್ಗೆ ಆರೋಗ್ಯ ಶಿಕ್ಷಣವನ್ನು ಕೊಡಲಾಗುತ್ತಿದೆ.

1994-95ನೇ (ನವೆಂಬರ್ 94ರ ಅಂತ್ಯದವರೆಗೆ) ಸಾಲಿನ ಆರೋಗ್ಯ ಕಾರ್ಯಕ್ರಮಗಳ ಪ್ರಗತಿ :

| | | |
|---|---|---|
| 1) | ಶಾಲೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ (1, 4 ಮತ್ತು 7ನೇ ತರಗತಿ) | 2580969 |
| 2) | ವೈದ್ಯಕೀಯ ಪರೀಕ್ಷೆ ನಡೆಸಲಾದ ವಿದ್ಯಾರ್ಥಿಗಳ ಸಂಖ್ಯೆ | 506391 |
| 3) | ನ್ಯೂನತೆಗಳು ಕಂಡುಬಂದ ವಿದ್ಯಾರ್ಥಿಗಳ ಸಂಖ್ಯೆ | 27860 |
| 4) | ನ್ಯೂನತೆಯುಳ್ಳ ವಿದ್ಯಾರ್ಥಿಗಳಿಗೆ ಚಿಕಿತ್ಸೆಗಾಗಿ ಭೇಟಿ ನೀಡಿದ ಸಂಖ್ಯೆ | 23595 |

**ಲಸಿಕೆ ಮತ್ತು ಚುಚ್ಚುಮದ್ದು ಒದಗಿಸಿದ್ದು :**

| | | |
|---|---|---|
| 1) | ಡಿ. ಮತ್ತು ಟಿ. ಲಸಿಕೆಗಳನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ | 441213 |
| 2) | ಟಿ.ಟಿ. ಲಸಿಕೆಗಳನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ | 370832 |

3) ಶಾಲೆಗಳಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಚರ್ಚಿಸಿದ ಸಂಖ್ಯೆ 82715

4) ಶಾಲಾ ಆರೋಗ್ಯ ಕಾರ್ಯಕ್ರಮದಲ್ಲಿ ತರಬೇತಿ ಹೊಂದಿದ ಉಪಾಧ್ಯಾಯರುಗಳ ಸಂಖ್ಯೆ 4053

---

ರಾಜ್ಯದಲ್ಲಿರುವ 4 ವಿಭಾಗೀಯ ಸಹ ನಿರ್ದೇಶಕರ ಕಾರ್ಯಾಲಯಕ್ಕೆ ಹೊಂದಿಕೊಂಡಿರುವ ಸಂಚಾರಿ ನೇತ್ರ ಹಾಗೂ ದಂತ ಚಿಕಿತ್ಸಾ ಘಟಕಗಳು ಈ ಕಾರ್ಯಕ್ರಮದಡಿಯಲ್ಲಿ ಕಾರ್ಯನಿರ್ವಹಿಸುತ್ತಿವೆ.

**ಸಂಚಾರಿ ನೇತ್ರ ಹಾಗೂ ದಂತ ಚಿಕಿತ್ಸಾ ಘಟಕಗಳ 1994-95ನೇ ಸಾಲಿನ ಪ್ರಗತಿ :**

(ಏಪ್ರಿಲ್ 94ರಿಂದ ನವೆಂಬರ್ 94ರ ಅಂತ್ಯದವರೆಗೆ)

| | | |
|---|---|---|
| 1) | ಪ್ರಾಥಮಿಕ ಆರೋಗ್ಯಕೇಂದ್ರಗಳಿಗೆ ಭೇಟಿ ನೀಡಿದ ಸಂಖ್ಯೆ | 55 |
| 2) | ಭೇಟಿಯಾದ ಶಾಲೆಗಳ ಸಂಖ್ಯೆ | 392 |
| **ದಂತ** | | |
| 1) | ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ (1. 4 ಮತ್ತು 7ನೇ ತರಗತಿ) | 31609 |
| 2) | ನ್ಯೂನತೆ ಕಂಡುಬಂದ ಸಂಖ್ಯೆ | 7423 |
| 3) | ಚಿಕಿತ್ಸೆಗಳಿಗೆ ಒಳಗಾದವರ ಸಂಖ್ಯೆ | 3352 |
| **ನೇತ್ರ** | | |
| 1) | ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ | 35058 |
| 2) | ನ್ಯೂನತೆ ಕಂಡುಬಂದ ವಿದ್ಯಾರ್ಥಿಗಳ ಸಂಖ್ಯೆ | 2142 |
| 3) | ಚಿಕಿತ್ಸೆಗೆ ಒಳಗಾದವರ ಸಂಖ್ಯೆ | 2039 |
| 4) | ಕನ್ನಡಕಗಳನ್ನು ಬಳಸಲು ಸಲಹೆ ನೀಡಿದ ವಿದ್ಯಾರ್ಥಿಗಳ ಸಂಖ್ಯೆ | 215 |
| 5) | ಆರೋಗ್ಯ ಸಂಸ್ಥೆಗಳಿಗೆ ಕಳುಹಿಸಿದ ವಿದ್ಯಾರ್ಥಿಗಳ ಸಂಖ್ಯೆ | 1443 |

---

## ಕ್ಷೇತ್ರಾಧ್ಯಯನ ಮತ್ತು ಪ್ರಾತ್ಯಕ್ಷಿಕ ಘಟಕ

1994-95ನೇ ಸಾಲಿನಲ್ಲಿ ಅನುಷ್ಠಾನಗೊಳಿಸುವ ಉದ್ದೇಶಕ್ಕಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ಯಲಹಂಕದ ಅಡಿಯಲ್ಲಿ ಬರುವ 18 ಹಳ್ಳಿಗಳಲ್ಲಿ ಆರೋಗ್ಯ ಶಿಕ್ಷಣ ಚಟುವಟಿಕೆಗಳ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ.

ಶಾಲಾ ಶಿಕ್ಷಕರ ತರಬೇತಿ. ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯೇತರ ಸಿಬ್ಬಂದಿ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ನೀಡುವುದೇ ಅಲ್ಲದೆ ಆರೋಗ್ಯ ಶಿಕ್ಷಣ ಮತ್ತು ಮಾಧ್ಯಮಕ್ಕೆ ಸಂಬಂಧಿಸಿದಂತೆ ತಯಾರಿಸಿದ ಸಾಮಗ್ರಿಗಳ ಕ್ಷೇತ್ರ ಪ್ರಯೋಗ ಪ್ರಾತ್ಯಕ್ಷಿಕೆಗಳನ್ನು ಕೈಗೊಂಡಿದ್ದಿತು.

## ವಿದ್ಯಾರ್ಥಿ ಆರೋಗ್ಯ ಶಿಕ್ಷಣ ಘಟಕ

ಈ ವಿಭಾಗವು ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ಆರೋಗ್ಯ ಶಿಕ್ಷಣ ಕಾರ್ಯಕ್ರಮಗಳನ್ನು ಯೋಜಿಸಲು, ವ್ಯವಸ್ಥೆಗೊಳಿಸಲು ಮತ್ತು ಅನುಷ್ಠಾನಗೊಳಿಸಲು ಜವಾಬ್ದಾರಿಯುತವಾಗಿರುತ್ತದೆ.

ಈ ವಿಭಾಗವು ಕೆಲವು ಜಿಲ್ಲೆಗಳಿಗೆ ಭೇಟಿ ಕೊಟ್ಟು ಆರೋಗ್ಯ ಶಿಕ್ಷಣ ಚಟುವಟಿಕೆಗಳ ಮೇಲ್ವಿಚಾರಣೆ ನಡೆಸಿ ಕಾರ್ಯಕ್ರಮದ ಬಗ್ಗೆ ಸೂಕ್ತ ಸೂಚನೆಯನ್ನು ನೀಡಿರುತ್ತಾರೆ.

## ಪೌಷ್ಟಿಕ ಆಹಾರ ಕಾರ್ಯಕ್ರಮಗಳು

2000 ಇಸವಿಯ ವೇಳೆಗೆ 5 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಲ್ಲಿರುವ ಸಾಧಾರಣ ಹಾಗೂ ತೀವ್ರ ರೀತಿಯ ಅಪೌಷ್ಟಿಕತೆಯ ಪ್ರಮಾಣವನ್ನು ಅರ್ಧ ಭಾಗದಷ್ಟು ಕಡಿಮೆ ಮಾಡುವುದು ಪೌಷ್ಟಿಕ ಆಹಾರ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

**ಈ ಕಾರ್ಯಕ್ರಮದ ಇನ್ನಿತರ ನಿರ್ಧಿಷ್ಟ ಗುರಿಗಳೆಂದರೆ :**

1) 'ಎ' ಅನ್ನಾಂಗದ ಕೊರತೆ ಮತ್ತು ಇದರಿಂದುಂಟಾಗುವ ಅಂಧತ್ವ ನಿವಾರಣೆ
2) ಕಡಿಮೆ ತೂಕದಿಂದ ಜನಿಸುವ ಮಕ್ಕಳ ಸಂಖ್ಯೆಯನ್ನು ಕಡಿಮೆ ಮಾಡುವುದು
3) ಎಲ್ಲೆಡೆ ಅಯೋಡಿನ್‌ಯುಕ್ತ ಉಪ್ಪಿನ ಸೇನೆ
4) ಕಬ್ಬಿಣಾಂಶದ ಕೊರತೆಯಿಂದುಂಟಾಗುವ ರಕ್ತಹೀನತೆಯ ನಿವಾರಣೆ

**ಅರ್ಧ ದಶಕದಗುರಿಗಳೆಂದರೆ :**

1) ತೀವ್ರ ರೀತಿಯ ಅಪೌಷ್ಟಿಕತೆಯ ಪ್ರಮಾಣವನ್ನು 1990ರಲ್ಲಿದ್ದ ಪ್ರಮಾಣದ ಅರ್ಧ ಭಾಗದಷ್ಟು ಕಡಿಮೆ ಮಾಡುವುದು.
2) ಕಡಿಮೆ ತೂಕದಿಂದ ಜನಿಸುವ ಮಕ್ಕಳ ಸಂಖ್ಯೆಯನ್ನು ಶೇ. 10ರಷ್ಟು ಕಡಿಮೆ ಮಾಡುವುದು.
3) ಕಬ್ಬಿಣಾಂಶದ ಕೊರತೆಯಿಂದುಂಟಾಗುವ ರಕ್ತಹೀನತೆಯನ್ನು ಶೇ. 20ರಷ್ಟು ಕಡಿಮೆ ಮಾಡುವುದು.

4) ಎಲ್ಲೆಡೆ ಅಯೋಡಿನ್‌ಯುಕ್ತ ಉಪ್ಪಿನ ಸೇವನೆ

5) 'ಬಿಟಾಟ್ ಸ್ಪಾಟ್' ಗಳ ಸಂಖ್ಯೆಯನ್ನು ಶೇ. 1 ರಷ್ಟು ಕಡಿಮೆ ಮಾಡುವುದು.

6) ಶೇ. 50 ತಾಯಂದಿರು ಮಕ್ಕಳಿಗೆ 4-6 ತಿಂಗಳಿನವರೆಗೆ ತಾಯಿ ಹಾಲು ಮಾತ್ರ ಕುಡಿಸುವುದು ಮತ್ತು ಶೇ. 80ರಷ್ಟು ಮಕ್ಕಳಿಗೆ ಸಕಾಲದಲ್ಲಿ ಸೂಕ್ತ ಪೂರಕ ಪೌಷ್ಟಿಕ ಆಹಾರ ಪ್ರಾರಂಭಿಸುವುದು.

7) ಎಲ್ಲಾ ಆಸ್ಪತ್ರೆಗಳು ಮತ್ತು ಪ್ರಸೂತಿ ಕೇಂದ್ರಗಳನ್ನು 'ಶಿಶುಮಿತ್ರ' ಸಂಸ್ಥೆಗಳನ್ನಾಗಿ ಮಾಡುವುದು.

**ಪೌಷ್ಟಿಕ ಆಹಾರ ಕಾರ್ಯಕ್ರಮವು ಈ ಕಾರ್ಯ ಚಟುವಟಿಕೆಗಳನ್ನೊಳಗೊಂಡಿರುತ್ತದೆ:**

1) ಸಮಗ್ರ ಬಾಲ ವಿಕಾಸ ಯೋಜನಾ ಕಾರ್ಯಕ್ರಮ

2) ರಾಷ್ಟ್ರೀಯ ಅಯೋಡಿನ್ ಕೊರತೆ/ಕಾಯಿಲೆಗಳ ನಿವಾರಣೆ

3) ಪೌಷ್ಟಿಕ ಆಹಾರ ಶಿಕ್ಷಣ ಕಾರ್ಯಕ್ರಮಗಳು

4) ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖಾ ಕಾರ್ಯಕ್ರಮ ಅಭಿವೃದ್ಧಿಗೊಳಿಸುವ ಮುಖಾಂತರ 'ಎ' ಅನ್ನಾಂಗ ಕೊರತೆ ನಿವಾರಣೆ.

5) ಪೌಷ್ಟಿಕ ಆಹಾರದ ನಿರಂತರ ಸಮೀಕ್ಷೆ

**ಸಮಗ್ರ ಬಾಲವಿಕಾಸ ಯೋಜನೆ :**

ಈ ಕಾರ್ಯಕ್ರಮದಡಿಯಲ್ಲಿ ಕೆಳಕಂಡ ಸೇವೆಗಳನ್ನು ಒದಗಿಸಲಾಗುತ್ತಿದೆ.

1) ಪೂರಕ ಪೌಷ್ಟಿಕ ಆಹಾರ ವಿತರಣೆ

2) ರಕ್ಷಣಾ ಚಿಕಿತ್ಸೆ

3) ಆರೋಗ್ಯ ತಪಾಸಣೆ

4) ಸೂಚಕ ಸೇವೆಗಳು

5) ಆರೋಗ್ಯ ಮತ್ತು ಪೌಷ್ಟಿಕ ಆಹಾರ ಶಿಕ್ಷಣ

6) ಅನೌಪಚಾರಿಕ ಶಾಲಾಪೂರ್ವ ಶಿಕ್ಷಣ

ವಲಯ ಮಟ್ಟದ ತರಬೇತಿ ಮತ್ತು ವೈದ್ಯಾಧಿಕಾರಿಗಳ ನಿರಂತರ ಶಿಕ್ಷಣ ತರಬೇತಿ ಶೇ. 100ರಷ್ಟು ರಕ್ಷಣಾ ಚಿಕಿತ್ಸೆ. ಸೂಚಕ ಸೇವೆಗಳು. ಅಂಗನವಾಡಿ ಕೇಂದ್ರಗಳಲ್ಲಿ ಆರೋಗ್ಯ ತಪಾಸಣೆ ಮುಂತಾದವು ಆರೋಗ್ಯ ಮತ್ತು ಕುಟುಂಬ ಕಲ್ಯಾಣಸೇವೆಗಳ ಇಲಾಖೆಯ ಜವಾಬ್ದಾರಿಯಾಗಿದೆ. 1993-94ನೇ ಸಾಲಿನವರೆಗೆ 166 ತಾಲ್ಲೂಕುಗಳಲ್ಲಿ ಸಮಗ್ರ

ಬಾಲವಿಕಾಸ ಯೋಜನಾ ಕಾರ್ಯಕ್ರಮ ಜಾರಿಯಲ್ಲಿದೆ. ಈಗ 148 ತಾಲ್ಲೂಕುಗಳಲ್ಲಿ ಈ ಕಾರ್ಯಕ್ರಮದ ಸಮಗ್ರ ಉಸ್ತುವಾರಿ ನಡೆಯುತ್ತಿದೆ.

## ಸಮಗ್ರ ಬಾಲವಿಕಾಸ ಯೋಜನೆಯ 1994-95ನೇ ಸಾಲಿನ ಸಾಧನೆಗಳು (ಸೆಪ್ಟೆಂಬರ್ 94ರವರಗೆ)

1. ವಲಯ ಮಟ್ಟದತರಬೇತಿ :

| ಗುರಿ | ಸಾಧನೆ | ಶೇಕಡ |
|---|---|---|
| 7878 | 5524 | 70.12 |

ಆರೋಗ್ಯ ತಪಾಸಣೆಗಾಗಿ ಅಂಗನವಾಡಿ ಕೇಂದ್ರಗಳಿಗೆ ವೈದ್ಯಾಧಿಕಾರಿಗಳ ಭೇಟಿ :

| ತ್ರೈಮಾಸಿಕ | ಗುರಿ | ಸಾಧನೆ | ಶೇಕಡ |
|---|---|---|---|
| ಮೊದಲನೇ ತ್ರೈಮಾಸಿಕ | 26735 | 12330 | 46.12 |
| ಎರಡನೇ ತ್ರೈಮಾಸಿಕ | 26735 | 13913 | 52.04 |

2. ಸಮಗ್ರ ಬಾಲವಿಕಾಸ ಸಲಹೆಗಾರರಿಂದ ನಡೆಸಿದ ತರಬೇತಿ ಕಾರ್ಯಕ್ರಮಗಳು

| ನಡೆಸಿದ ತರಬೇತಿಗಳ ಸಂಖ್ಯೆ | ತರಬೇತಿ ಪಡೆದ ವೈದ್ಯಾಧಿಕಾರಿಗಳ ಸಂಖ್ಯೆ | ಸ. ಬಾ. ವಿ. ಯೋಜನಾಧಿಕಾರಿಗಳ ಸಂಖ್ಯೆ | ತರಬೇತಿ ಪಡೆದ ಇತರರ ಸಂಖ್ಯೆ |
|---|---|---|---|
| 9 | 234 | 34 | 26 |

3. ಸಮಗ್ರ ಬಾಲವಿಕಾಸ ಯೋಜನೆಯಡಿಯಲ್ಲಿನ ರಕ್ಷಣಾ ಚಿಕಿತ್ಸೆಯ ಪ್ರಗತಿ :

| ಲಸಿಕೆ | ಗುರಿ | ಸಾಧನೆ | ಶೇಕಡ |
|---|---|---|---|
| 1) ಬಿಸಿಜಿ | 844726 | 307366 | 36.39 |
| 2) ಡಿಪಿಟಿ | 844726 | 268331 | 31.77 |
| 3) ಪೋಲಿಯೋ | 844726 | 267295 | 31.64 |
| 4) ದಢಾರ | 844726 | 257225 | 30.45 |
| 5) ಟಿಟಿ (ತಾ) | 930291 | 319474 | 34.34 |

**2) ರಾಷ್ಟ್ರೀಯ ಅಯೋಡಿನ್ ಕೊರತೆ/ಕಾಯಿಲೆ ನಿಯಂತ್ರಣಾ ಕಾರ್ಯಕ್ರಮ :**

ರಾಜ್ಯದಲ್ಲಿ ಅಯೋಡಿನ್‌ಕೊರತೆ/ಕಾಯಿಲೆ ನಿಯಂತ್ರಣಾ ಘಟಕವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ 1988-89ರಲ್ಲಿ ಶೇ. 100 ರಷ್ಟು ಕೇಂದ್ರ ಸರ್ಕಾರದ ಸಹಾಯದಿಂದ ಪ್ರಾರಂಭಿಸಲಾಯಿತು.

ಈ ಕಾರ್ಯಕ್ರಮದಡಿಯಲ್ಲಿ ಗಳಗಂಡರೋಗ ಮತ್ತು ಇತರ ಅಯೋಡಿನ್ ಕೊರತೆ/ಕಾಯಿಲೆಗಳ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ರಾಜ್ಯದ ನಾಲ್ಕು ಜಿಲ್ಲೆಗಳನ್ನು ಗಳಗಂಡ ಪೀಡಿತ ಪ್ರದೇಶಗಳೆಂದು ಪರಿಗಣಿಸಲಾಗಿದ್ದು, ಈ ಜಿಲ್ಲೆಗಳಲ್ಲಿ ಅಯೋಡಿನ್‌ಯುಕ್ತವಲ್ಲದ ಉಪ್ಪಿನ ಮಾರಾಟವನ್ನು ರಾಜ್ಯಪತ್ರದ ಪ್ರಕಟಣೆ ಮೂಲಕ ನಿಷೇಧಿಸಲಾಗಿದೆ ಹಾಗೂ ಒದಗಿಸಲಾಗಿರುವ ಅಯೋಡಿನ್‌ಯುಕ್ತ ಉಪ್ಪಿನ ವಿಶ್ಲೇಷಣೆ ನಡೆಸಲಾಗುತ್ತಿದೆ.

**ಅಯೋಡಿನ್‌ಯುಕ್ತ ಉಪ್ಪಿನ ವ್ಯವಸ್ಥೆ :**

ಉಪ್ಪು ಮಾರಾಟಗಾರರು ಅಯೋಡಿನ್‌ಯುಕ್ತ ಉಪ್ಪನ್ನೇ ಮಾರಾಟ ಮಾಡುವಂತೆ ಉತ್ತೇಜಿಸುವ ಸಲುವಾಗಿ ಅಯೋಡಿನ್‌ಯುಕ್ತ ಉಪ್ಪನ್ನು ಕಡಿಮೆ ದರದಲ್ಲಿ ಗಳಗಂಡ ಪೀಡಿತ ಜಿಲ್ಲೆಗಳಿಗೆ ಒದಗಿಸುವಂತೆ ಆಹಾರ ಮತ್ತು ನಾಗರೀಕ ಪೂರೈಕೆ ಇಲಾಖೆ ನಿರ್ದೇಶಕರನ್ನು ಕೋರಲಾಗಿದೆ. ಅಯೋಡಿನ್‌ಯುಕ್ತ ಉಪ್ಪನ್ನು ಮಾರುವವರ ಮತ್ತು ಕೊಳ್ಳುವವರ ಒಂದು ಸಭೆಯನ್ನು ಚಿಕ್ಕಮಗಳೂರಿನಲ್ಲಿ ನಡೆಸಲಾಯಿತು. ಈ ಸಭೆಯಲ್ಲಿ ಉಪ್ಪಿನ ಉಪ ಆಯುಕ್ತರು. ಮದ್ರಾಸ್ ಮತ್ತು ಯೂನಿಸೆಫ್‌ನ ಪ್ರತಿನಿಧಿಗಳು ಭಾಗವಹಿಸಿದ್ದರು.

**ಗುಣಮಟ್ಟ ನಿಯಂತ್ರಣ :**

ಅಯೋಡಿನ್‌ಯುಕ್ತ ಉಪ್ಪಿನ ಗುಣಮಟ್ಟ ನಿಯಂತ್ರಣದ ಸಲುವಾಗಿ ಪಿ.ಎಫ್.ಎ. ಅನ್ವಯ ಅಯೋಡಿನ್ ಉಪ್ಪಿನ ಮಾದರಿಗಳನ್ನು ಆಹಾರ ನಿರೀಕ್ಷಕರ ಮೂಲಕ ಸಂಗ್ರಹಿಸಿ. ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು, ಇಲ್ಲಿಗೆ ವಿಶ್ಲೇಷಣೆಗಾಗಿ ಕಳುಹಿಸಲಾಗುತ್ತಿದೆ.

1994ನೇ ಏಪ್ರಿಲ್‌ನಿಂದ 62 ಉಪ್ಪಿನ ಮಾದರಿಗಳನ್ನು ಗಳಗಂಡ ಪೀಡಿತ ಜಿಲ್ಲೆಗಳಿಂದ ಸಂಗ್ರಹಿಸಿದ್ದು, ಸಾರ್ವಜನಿಕ ಆರೋಗ್ಯ ಸಂಸ್ಥೆ. ಬೆಂಗಳೂರಿನಲ್ಲಿ ವಿಶ್ಲೇಷಿಸಲಾಗಿದೆ.

ಯೂನಿಸೆಫ್‌ನಿಂದ ಬಂದಿರುವ ಕ್ಷೇತ್ರ ಪರೀಕ್ಷಕ ಪೆಟ್ಟಿಗೆಗಳನ್ನು ಗಳಗಂಡ ಪೀಡಿತ ನಾಲ್ಕು ಜಿಲ್ಲೆಗಳ ಆರೋಗ್ಯ ಕಾರ್ಯಕರ್ತರಿಗೆ ಹಂಚಲಾಗಿದೆ ಮತ್ತು ಈ ಪೆಟ್ಟಿಗೆಗಳ ಸೂಕ್ತ ಬಳಕೆ ಬಗ್ಗೆ ಕಾರ್ಯಕರ್ತರಿಗೆ ಒಂದು ದಿನದ ತರಬೇತಿ ನೀಡಲಾಗಿದೆ.

ಆರೋಗ್ಯ ಕಾರ್ಯಕರ್ತರು ಏಪ್ರಿಲ್ 94ರಿಂದ 14003 ಮಾದರಿಗಳನ್ನು ಈ ಪೆಟ್ಟಿಗೆಗಳ ಸಹಾಯದಿಂದ ಪರೀಕ್ಷಿಸಿದ್ದಾರೆ. ಇವುಗಳಲ್ಲಿ 10370 ಮಾದರಿಗಳಲ್ಲಿ ಅಯೋಡಿನ್ ಪ್ರಮಾಣವು 15 ಪಿ.ಎಂ. ಗಿಂತ ಹೆಚ್ಚು ಇದೆಯೆಂದು ಕಂಡುಬಂದಿವೆ.

**ಶೈಕ್ಷಣಿಕ ಚಟುವಟಿಕೆಗಳು :**

**ಅಯೋಡಿನ್ ಕೊರತೆ** : ಕಾಯಿಲೆ ಕುರಿತು 20 ಪ್ರಶ್ನೆಗಳನ್ನುಳ್ಳ 10.000 ಪುಸ್ತಕಗಳನ್ನು ಕನ್ನಡದಲ್ಲಿ ಮುದ್ರಿಸಿ. ಗಳಗಂಡ ಪೀಡಿತ ಪ್ರದೇಶಗಳಿಗೆ ಹಂಚಲಾಗಿದೆ. ಅಯೋಡಿನ್ ಕೊರತೆ/ಕಾಯಿಲೆಗಳನ್ನು ಕುರಿತ ಕನ್ನಡದ ಕರಪತ್ರಗಳು ಮುದ್ರಣ ಹಂತದಲ್ಲಿದೆ.

ಕರ್ನಾಟಕ ರಾಜ್ಯದಲ್ಲಿ ಅಯೋಡಿನ್ ಕೊರತೆ/ಕಾಯಿಲೆ ಕುರಿತಂತೆ ಒಂದು ಪುಸ್ತಕವನ್ನು ಹೊರತರಲಾಗಿದೆ.

**ಈ ಕಾರ್ಯಕ್ರಮದ ಪ್ರಗತಿ ಪರಿಶೀಲನೆ :**

ಅಯೋಡಿನ್ ಕೊರತೆ : ಕಾಯಿಲೆ ನಿಯಂತ್ರಣಾ ಕಾರ್ಯಕ್ರಮದ ಪ್ರಗತಿ ಪರಿಶೀಲನೆಗಾಗಿ ಏಳನೇ ರಾಜ್ಯಮಟ್ಟದ ಸಮನ್ವಯ ಸಭೆಯನ್ನು ದಿನಾಂಕ 14-2-94ರಂದುಕರೆಯಲಾಗಿತ್ತು.

**ರಾಜ್ಯಮಟ್ಟದ ಕಾರ್ಯಾಗಾರ :**

ಮಾರ್ಚಿ ತಿಂಗಳಲ್ಲಿ ಅಯೋಡಿನ್ ಕೊರತೆ/ಕಾಯಿಲೆಗಳ ಬಗ್ಗೆ ಒಂದು ರಾಜ್ಯ ಮಟ್ಟದ ಕಾರ್ಯಾಗಾರ ನಡೆಸಲು ಉದ್ದೇಶಿಸಲಾಗಿದೆ.

**ಅಯೋಡಿನ್ ಕೊರತೆ** : ಕಾಯಿಲೆಯ ಕಾರ್ಯಕ್ರಮವನ್ನು ಅಭಿವೃದ್ಧಿಗೊಳಿಸುವ ಸಲುವಾಗಿ ಪ್ರಯೋಗ ಶಾಲೆಯ ಗ್ಲಾಸ್‌ವೇರ್‌ಗಳನ್ನು ಹಾಗೂ ವೈಜ್ಞಾನಿಕ ಸಲಕರಣೆಗಳನ್ನು ಭಾರತ ಸರ್ಕಾರವು ಒದಗಿಸಿದೆ. ಒಂದು ಪ್ರಯೋಗಶಾಲಾ ತಂತ್ರಜ್ಞರ ಹಾಗೂ ಪ್ರಯೋಗ ಶಾಲೆಯ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲಾಗಿದೆ.

**ತರಬೇತಿ ಕಾರ್ಯಕ್ರಮಗಳು :**

| ಜಿಲ್ಲೆ | ತರಬೇತಿ ಪಡೆದ ಆರೋಗ್ಯ ಕಾರ್ಯಕರ್ತರ ಸಂಖ್ಯೆ |
|---|---|
| ಚಿಕ್ಕಮಗಳೂರು | 475 |

**ಕ್ಷೇತ್ರ ಪರೀಕ್ಷಾ ಪೆಟ್ಟಿಗೆಯಿಂದ ಅಯೋಡಿನ್‌ಯುಕ್ತ ಉಪ್ಪಿನ ಅಂಶದ ಪರೀಕ್ಷೆ**

| 0 | 5-10 | 15 | 30 ಮತ್ತು ಹೆಚ್ಚು |
|---|---|---|---|
| 800 | 2833 | 4123 | 6247 |

**ಪಿ.ಎಫ್.ಎ. ಅನ್ವಯ ಉಪ್ಪಿನ ವಿಶ್ಲೇಷಣೆ :**

| ವಿಶ್ಲೇಷಿಸಿದ ಉಪ್ಪಿನ ಮಾದರಿ ಸಂಖ್ಯೆ | ಅಗತ್ಯ ಪ್ರಮಾಣ ದಲ್ಲಿ ಇದ್ದದ್ದು | ಅಗತ್ಯ ಪ್ರಮಾಣ ದಲ್ಲಿ ಇಲ್ಲದವು |
|---|---|---|
| 62 (ಡಿಸೆಂಬರ್ 94ರವರೆಗೆ) | 57 | 5 |

**ಅಯವ್ಯಯ ವಿವರಣೆ :**

| ವರ್ಷ | ಕೇಂದ್ರ ಸರ್ಕಾರದಿಂದ ಮಂಜೂರಾತಿ | ಖರ್ಚು |
|---|---|---|
| 1994-95 | 2.10 ಲಕ್ಷ | 1.43.827 (ಡಿಸೆಂಬರ್ 94ರ ವರೆಗೆ) |

**3) ತರಬೇತಿ ಒಳಗೊಂಡಂತೆ ಪೌಷ್ಟಿಕ ಆಹಾರ ಶಿಕ್ಷಣ ಚಟುವಟಿಕೆಗಳು :**

ಬಿಜಾಪುರ, ಚಿತ್ರದುರ್ಗ ಮತ್ತು ಮೈಸೂರು ಜಿಲ್ಲೆಗಳಲ್ಲಿ ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿಗಳು. ಉಪ ಆರೋಗ್ಯ ಶಿಕ್ಷಣಾಧಿಕಾರಿಗಳು. ಜಿಲ್ಲಾ ಶುಶ್ರೂಷಣಾ ಮೇಲ್ವಿಚಾರಕರು, ಕ್ಷೇತ್ರ ಆರೋಗ್ಯ ಶಿಕ್ಷಕರು. ಹಿರಿಯ ಆರೋಗ್ಯ ಸಹಾಯಕಿಯವರುಗಳಿಗೆ ಫ್ಲಿಫ್ ಪುಸ್ತಕವನ್ನು ಬಳಸುವ ಬಗ್ಗೆ ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಯಿತು. ಒಟ್ಟು 224 ಆರೋಗ್ಯ ಕಾರ್ಯಕರ್ತರು ತರಬೇತಿ ಪಡೆದರು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳು. ಸಾರ್ವಜನಿಕ ಸಹಕಾರ ಮತ್ತು ಮಕ್ಕಳ ಅಭಿವೃದ್ಧಿಯ ರಾಷ್ಟ್ರೀಯ ಸಂಸ್ಥೆ. ಸಮಗ್ರ ಬಾಲವಿಕಾಸ ಯೋಜನಾ ಸಲಹೆಗಾರರು ನಡೆಸುವ ತರಬೇತಿ ಕಾರ್ಯಕ್ರಮಗಳಲ್ಲಿ ಪೌಷ್ಟಿಕ ಆಹಾರ ವಿಭಾಗವು ಭಾಗವಹಿಸಿದ್ದಿತು. ಹಸಿರುಸೊಪ್ಪು ಕುರಿತಂತೆ ಕನ್ನಡದಲ್ಲಿ 10.000 ಭಿತ್ತಿ ಪತ್ರಗಳು. 20.000 ಮಡಿಕೆ ಪತ್ರಗಳು ಮತ್ತು 40.000 ಕರಪತ್ರಗಳನ್ನು ಮುದ್ರಿಸಿ ಎಲ್ಲಾ ಜಿಲ್ಲೆಗಳಿಗೆ ಮತ್ತು ಇಲಾಖೆಯ ಬೋಧನಾ ಸಂಸ್ಥೆಗಳಿಗೆ ಕ್ಷೇತ್ರಮಟ್ಟದ ಆರೋಗ್ಯ ಸಂಸ್ಥೆಗಳಿಗೆ ತಲುಪಿಸುವ ಸಲುವಾಗಿ ಹಂಚಲಾಗಿದೆ.

ತಾಯಿ ಹಾಲಿನ ಪ್ರಾಮುಖ್ಯತೆ. ಮಗುವಿನ ಆಹಾರ ಕುರಿತ ಒಂದು ಕರಪತ್ರ. ಒಂದು ಮಡಿಕೆ ಪತ್ರ. ಒಂದು ಭಿತ್ತಿ ಪತ್ರ, ಒಂದು ಕಾರ್ಡು ಮುದ್ರಣ ಹಂತದಲ್ಲಿದೆ.

**ಪೌಷ್ಠಿಕ ಆಹಾರ ಶಿಕ್ಷಣ ಮತ್ತು ಪ್ರಾತ್ಯಕ್ಷಿಕ ಘಟಕಗಳು :**

ಬೆಂಗಳೂರು ಗ್ರಾಮಾಂತರ, ಶಿವಮೊಗ್ಗ, ಕೋಲಾರ, ಚಿತ್ರದುರ್ಗ ಮತ್ತು ತುಮಕೂರುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪೌಷ್ಠಿಕ ಆಹಾರ ಶಿಕ್ಷಣ ಮತ್ತು ಪ್ರಾತ್ಯಕ್ಷಿಕ ಘಟಕಗಳ ಪ್ರಗತಿ ಕೆಳಕಂಡಂತಿದೆ.

| ಪೌಷ್ಠಿಕ ಆಹಾರ ಪ್ರಾತ್ಯಕ್ಷಿಕೆಗಳು | ಗುಂಪು ಸಭೆ | ವಸ್ತು ಪ್ರದರ್ಶನ | ಚಲನಚಿತ್ರ ಪ್ರದರ್ಶನ |
|---|---|---|---|
| 249 | 404 | 260 | 58 |

**ಪಾಷ್ಠಿಕ ಆಹಾರ ಶಿಕ್ಷಣ :**

**ಅಯವ್ಯಯ ವಿವರ**

| ವರ್ಷ | ಮಂಜೂರಾದ ಹಣ ಲಕ್ಷಗಳಲ್ಲಿ | ಖರ್ಚು- ಲಕ್ಷಗಳಲ್ಲಿ |
|---|---|---|
| 1994-95 | 1.00 | ಶಿಕ್ಷಣ ಸಾಮಗ್ರಿಗಳ ಮುದ್ರಣಕ್ಕಾಗಿ ಟೆಂಡರ್ ಕರೆಯಲಾಗಿದೆ. |

**4) ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಅಭಿವೃದ್ಧಿ ಕಾರ್ಯಕ್ರಮದ ಮೂಲಕ 'ಎ' ಅನ್ನಾಂಗ ಕೊರತೆ ನಿವಾರಣಾಕಾರ್ಯಕ್ರಮ :**

ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಅಭಿವೃದ್ಧಿ ಹಾಗೂ ಪೌಷ್ಠಿಕ ಆಹಾರ ಶಿಕ್ಷಣ ಕಾರ್ಯಕ್ರಮದ ಮೂಲಕ 'ಎ' ಅನ್ನಾಂಗ ಕೊರತೆ ನಿವಾರಣೆಗಾಗಿ ಒಂದು ಪ್ರಾಯೋಗಿಕ ಅಧ್ಯಯನ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಸಂಬಂಧಪಟ್ಟ ಅಧಿಕಾರಿಗಳು/ನೌಕರರು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವ ಉದ್ದೇಶದಿಂದ ರಾಜ್ಯಮಟ್ಟದಲ್ಲಿ ಒಂದು, ಜಿಲ್ಲಾ ಮಟ್ಟದ ಸಭೆ ಒಂದು, ಹಾಗೂ ತಾಲ್ಲೂಕು ಮಟ್ಟದಲ್ಲಿ ಎರಡು ಸಭೆಗಳನ್ನು ವ್ಯವಸ್ಥೆ ಮಾಡಲಾಗಿದೆ. ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಕೋಲಾರ ಜಿಲ್ಲೆಯ 11 ತಾಲ್ಲೂಕುಗಳಲ್ಲಿ 110 ಹಳ್ಳಿಗಳನ್ನು ಆಯ್ಕೆ ಮಾಡಲಾಗಿದೆ. ಶಾಲಾ ಪೂರ್ವ ಮಕ್ಕಳಲ್ಲಿ 'ಎ' ಅನ್ನಾಂಗ ಕೊರತೆಯ ಪ್ರಮಾಣವನ್ನು ತಿಳಿಯಲು ಮತ್ತು ಕೆ.ಎ.ಪಿ. ಬಗ್ಗೆ ತಿಳಿಯಲು ಪ್ರಾರಂಭಿಕ ಸಮೀಕ್ಷೆಯನ್ನು ನಡೆಸಲಾಗುವುದು ಹಾಗೂ ಜಿಲ್ಲಾ ಮಟ್ಟ/ ತಾಲ್ಲೂಕು ಮಟ್ಟ/ ಗ್ರಾಮ ಮಟ್ಟದಲ್ಲಿ ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡಲಾಗುವುದು.

5) ರಾಷ್ಟ್ರೀಯ ಪೌಷ್ಠಿಕ ಆಹಾರ ಸಮೀಕ್ಷಾ ತಂಡದಿಂದ ಆಹಾರ ಸಮೀಕ್ಷೆ :

ರಾಷ್ಟ್ರೀಯ ಪೌಷ್ಠಿಕ ಆಹಾರ ಸಮೀಕ್ಷಾ ತಂಡವು ಎನ್.ಸಿ.ಎ.ಇ.ಆರ್. ಸಮೀಕ್ಷೆಯನ್ನು ಬೆಂಗಳೂರು. ಕೋಲಾರ, ಬಳ್ಳಾರಿ. ಬೀದರ್, ತುಮಕೂರು, ಶಿವಮೊಗ್ಗ. ಕೊಡಗು. ದಕ್ಷಿಣ ಕನ್ನಡ. ಚಿತ್ರದುರ್ಗ ಜಿಲ್ಲೆಗಳಲ್ಲಿ ನಡೆಸಿದೆ.

ಬೆಂಗಳೂರು ನಗರದ ಕೊಳಚೆ ಪ್ರದೇಶಗಳಲ್ಲಿ ಸಹ ಸಮೀಕ್ಷೆಯನ್ನು ನಡೆಸಲಾಗಿದೆ.

## ಮಾನಸಿಕ ಆರೋಗ್ಯ ಕಾರ್ಯಕ್ರಮ

ರಾಜ್ಯದಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಪ್ರಾರಂಭಿಕವಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿ, ಈ ಕಾರ್ಯಕ್ರಮವನ್ನು 1985-86ರಲ್ಲಿ ಅನುಷ್ಠಾನಗೊಳಿಸಲಾಯಿತು. ಈಗ ಈ ಕಾರ್ಯಕ್ರಮವನ್ನು ಇತರ 6 ಜಿಲ್ಲೆಗಳಿಗೆ ಅಂದರೆ, ವಿಜಾಪುರ, ಚಿತ್ರದುರ್ಗ, ಕೋಲಾರ, ದಕ್ಷಿಣ ಕನ್ನಡ. ಧಾರವಾಡ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿಗೆ ವಿಸ್ತರಿಸಲಾಗಿದೆ.

## ಶುಶ್ರೂಷಾ ಕಾರ್ಯಕ್ರಮ

ರಾಜ್ಯದ ಎಲ್ಲಾ ನಾಗರೀಕರಿಗೂ ಆರು ತಿಂಗಳಿಗೊಮ್ಮೆ ಉಚಿತ ವೈದ್ಯಕೀಯ ತಪಾಸಣೆ ಅವಕಾಶವನ್ನು ಒದಗಿಸಿಕೊಡುವುದು ಈ ಕಾರ್ಯಕ್ರಮದ ಉದ್ದೇಶವಾಗಿರುತ್ತದೆ.

ಈ ಉಚಿತ ವೈದ್ಯಕೀಯ ತಪಾಸಣೆಯಲ್ಲಿ ರಾಜ್ಯದಲ್ಲಿನ ಪ್ರತಿಯೊಬ್ಬ ಪ್ರಜೆಗೂ ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುವ ಪ್ರದೇಶ, ಕೊಳಚೆ ಪ್ರದೇಶ ಮತ್ತು ಆರ್ಥಿಕವಾಗಿ ಹಿಂದುಳಿದವರು ವಾಸಿಸುವ ಪ್ರದೇಶಗಳಲ್ಲಿ ಸಂಪೂರ್ಣ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳುವ ಅವಕಾಶವನ್ನು ಕಲ್ಪಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

ಈ ವೈದ್ಯಕೀಯ ತಪಾಸಣೆಯಲ್ಲಿ ಕೆಳಗೆ ತಿಳಿಸಿರುವ ಪರೀಕ್ಷೆಗಳನ್ನು ಒಳಪಡಿಸಲಾಗಿದೆ.

| | | |
|---|---|---|
| 1) ಭೌತಿಕ ಪರೀಕ್ಷೆ | - | ನಾಡಿ ಮಿಡಿತ,ರಕ್ತದ ಒತ್ತಡ. ಕಣ್ಣು ಕಿವಿ ಮೂಗು. ಹಲ್ಲು, ನಾಲಿಗೆ, ಚರ್ಮದರೋಗಗಳು ನ್ಯೂನತೆಗಳು ಇತ್ಯಾದಿ |
| 2) ದೇಹಕ್ಕೆ ಸಂಬಂಧಿಸಿದ ಪರೀಕ್ಷೆ | - | ಅದರಲ್ಲಿ ಹೃದಯ ಪರೀಕ್ಷೆ. ಶ್ವಾಸಕೋಶ ಪರೀಕ್ಷೆ. ನಾಡಿ ಪರೀಕ್ಷೆ. ಉದರ ಪರೀಕ್ಷೆ. ಇತ್ಯಾದಿ ಹಾಗೂ |
| 3) ಸರಳ ಪ್ರಯೋಗ ಶಾಲಾ ಪರೀಕ್ಷೆ | - | ಮಲ. ಮೂತ್ರ. ರಕ್ತ. ಇತ್ಯಾದಿ. |

ಕಾಯಿಲೆ ಹಾಗೂ ನ್ಯೂನತೆಗಳನ್ನು ಪ್ರಾರಂಭದ ಹಂತದಲ್ಲಿಯೇ ತಿಳಿಯಲು ಮೇಲ್ಕಂಡ ಪರೀಕ್ಷೆಗಳನ್ನು ನಡೆಸಲಾಗುವುದು.

ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಜಿಲ್ಲಾಮಟ್ಟದ ಸಮಿತಿಯನ್ನು ರಚಿಸಲಾಗಿದ್ದು, ಇದರಲ್ಲಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಯವರು ಅಧ್ಯಕ್ಷರಾಗಿದ್ದು, ಇತರ 9 ಜನ ಸದಸ್ಯರುಗಳು ಇರುತ್ತಾರೆ.

ಈ ಯೋಜನೆಯ ಪ್ರಕಾರ ಆರೋಗ್ಯ ತಪಾಸಣೆಯ ಕಾಲದಲ್ಲಿ ಪರೀಕ್ಷಿಸಿದವರಲ್ಲಿ ಯಾರಿಗಾದರೂ ಹೆಚ್ಚಿನ ಪರೀಕ್ಷೆ ಹಾಗೂ ಚಿಕಿತ್ಸೆ ಏನಾದರೂ ಬೇಕಾಗಿ ಕಂಡುಬಂದಲ್ಲಿ, ಅಂತಹವರುಗಳನ್ನು ಸೌಕರ್ಯವಿರುವ ಸೂಕ್ತ ಆಸ್ಪತ್ರೆಗಳಿಗೆ ಕಳುಹಿಸಿ ಕೊಡಲಾಗುತ್ತದೆ.

ಇಂತಹ ಸ್ಥಳಗಳಿಗೆ ಹೋಗಿ ಬರಲು ತಗಲುವ ಸಾರಿಗೆ ವೆಚ್ಚವನ್ನು ಆರ್ಥಿಕವಾಗಿ ಅಶಕ್ತರಾದ ರೋಗಿ ಹಾಗೂ ರೋಗಿಯ ಒಬ್ಬ ಸಂಗಾತಿಗೆ ವಿತರಣೆ ಮಾಡಲಾಗುತ್ತದೆ.

ಈ ಯೋಜನೆಯನ್ನು ಜಾರಿಗೆ ತರುವುದಕ್ಕಾಗಿ 1994-95ನೇ ಸಾಲಿಗೆ ಒಂದು ಕೋಟಿ ರೂ. ಗಳನ್ನು ನಿಗಧಿಗೊಳಿಸಲಾಗಿದೆ. ಈ ಹಣದಲ್ಲಿ ಡಿಸೆಂಬರ್ 94ರ ಅಂತ್ಯದವರೆಗೆ 4.35 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ.

1994-95ರ ಏಪ್ರಿಲ್ ತಿಂಗಳಿಂದ 1994ರ ಡಿಸೆಂಬರ್ ತಿಂಗಳ ಅಂತ್ಯದವರೆಗೆ ಸಾಧಿಸಲಾದ ಪ್ರಗತಿಯು ಈ ಕೆಳಕಂಡಂತೆ ಇರುತ್ತದೆ.

| ವೈದ್ಯಕೀಯ ತಪಾಸಣೆ ಹೊಂದಿರುವವರ ಸಂಖ್ಯೆ | ದೊಡ್ಡ ಆಸ್ಪತ್ರೆಗಳಿಗೆ ಕಳುಹಿಸಿದ ಪ್ರಕರಣಗಳ ಸಂಖ್ಯೆ | ವಿಶೇಷ ವೈದ್ಯಕೀಯ ಸಂಸ್ಥೆಗಳಿಗೆ ಕಳುಹಿಸಿದ ಪ್ರಕರಣಗಳು |
|---|---|---|
| 2,17,667 | 8,516 | 1,266 |

## ಲಸಿಕಾ ಸಂಸ್ಥೆ, ಬೆಳಗಾಂ

ಹುಚ್ಚುನಾಯಿ ಕಡಿತದ ವಿರುದ್ಧದ ಲಸಿಕೆಯನ್ನು ತಯಾರಿಸುವುದು (ಬಿ.ಪಿ.ಎಲ್. ಇನ್-ಆಕ್ಟಿವೇಟೆಡ್) ಈ ಸಂಸ್ಥೆಯ ಜವಾಬ್ದಾರಿಯಾಗಿರುತ್ತದೆ ಮತ್ತು ಲಸಿಕೆಯನ್ನು ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಆಸ್ಪತ್ರೆಗಳಿಗೂ ಮತ್ತು ಸ್ಥಾನಿಕ ಆರೋಗ್ಯ ಮತ್ತು ವೈದ್ಯಕೀಯ ಆಸ್ಪತ್ರೆಗಳಿಗೂ ಹಾಗೂ ರಿಜಿಸ್ಟರ್ಡ್ ವೈದ್ಯಕೀಯ ವೃತ್ತಿಗಾರರಿಗೆ ಕೂಡ ಪೂರೈಸಲಾಗುವುದು. ಇದಲ್ಲದೆ, ಭಾರತ ಸರ್ಕಾರದವರು ಒದಗಿಸುವ ಯು.ಐ.ಪಿ. ಲಸಿಕೆಗಳನ್ನು ಸಂಗ್ರಹಿಸುವುದು ಮತ್ತು ಬೆಳಗಾವಿ, ಗುಲ್ಬರ್ಗಾ ವಿಭಾಗಗಳ 8 ಜಿಲ್ಲೆಗಳಿಗೆ ಮತ್ತು ಬೆಂಗಳೂರು ವಿಭಾಗದ

ಚಿತ್ರದುರ್ಗ ಜಿಲ್ಲೆಗೆ ಪೂರೈಸುವುದು. ಬೇರೆ ಬೇರೆ ವೈದ್ಯಕೀಯ ಸಂಸ್ಥೆಗಳಿಂದ ಬರುವ ವೈದ್ಯಕೀಯ ವಿದ್ಯಾರ್ಥಿಗಳು. ಆರೋಗ್ಯ ನಿರೀಕ್ಷಕರ ತರಬೇತಿ ಹೊಂದುತ್ತಿರುವವರು. ಜಿಲ್ಲಾ ಆಸ್ಪತ್ರೆಗಳ ಸಹಾಯಕ ದಾದಿಯರು ಮತ್ತು ಸ್ಟಾಫ್ ನರ್ಸ್ ಮೊದಲಾದವರಿಗೆ ಹುಚ್ಚುನಾಯಿ ಕಡಿತದ ವಿರುದ್ಧದ ಲಸಿಕೆಯ ತಯಾರಿಕೆಯ ಪರೀಕ್ಷೆ ಹಾಗೂ ಚಿಕಿತ್ಸೆಯ ವಿಧಾನದ ಬಗ್ಗ ತರಬೇತಿ ನಿರೂಪಣೆ ನೀಡಲಾಗುವುದು. ಜಿಲ್ಲಾ ಆಸ್ಪತ್ರೆ. ಬೆಳಗಾವಿ. ಇಲ್ಲಿಂದ ಕಳುಹಿಸಲ್ಪಡುವ ಐ.ವಿ. ದ್ರಾವಣವನ್ನು ಸೂಕ್ಷ್ಮ ಕ್ರಿಮಿ ರಹಿತವಾಗಿರುವುದನ್ನು ಕಂಡುಹಿಡಿಯುವ ಬಗ್ಗೆ ಪರೀಕ್ಷಿಸುವುದು.

ಈ ಸಂಸ್ಥೆಯು ಶಿವಮೊಗ್ಗೆಯ ಸೂಕ್ಷ್ಮಾಣು ಜೀವಿ ಪ್ರಯೋಗಾಲಯದ ಕೆ.ಎಫ್.ಡಿ. ಲಸಿಕೆ ತಯಾರಿಕಾ ಘಟಕವು ತಯಾರಿಸಿದ ಕೆ.ಎಫ್.ಡಿ. ಲಸಿಕೆಯ ಗುಣ ನಿಯಂತ್ರಣ ಪರೀಕ್ಷೆಯನ್ನೂ ಸಹ ಕೈಗೊಳ್ಳಲಾಗುತ್ತದೆ.

1994-95ನೇ ಸಾಲಿನಗುರಿಯು 25,00,000 ಎಂ.ಎಲ್. ಗಳಾಗಿದ್ದು. 1994ರ ಡಿಸೆಂಬರ್ ಅಂತ್ಯದವರೆಗೆ 24,05,240 ಎಂ.ಎಲ್. ಗಳಷ್ಟು ಹುಚ್ಚುನಾಯಿ ಕಡಿತದ ವಿರುದ್ಧ ಲಸಿಕೆಯನ್ನು ತಯಾರಿಸಲಾಗಿದೆ. ಇದು ವಾರ್ಷಿಕ ಗುರಿಯ ಶೇಕಡ 96ರಷ್ಟು ಇರುತ್ತದೆ.

**1994-95ರ ಸಾಲಿನ ಅಯವ್ಯಯ ಮತ್ತು ವೆಚ್ಚ (ರೂ. ಗಳಲ್ಲಿ)**

| ವರ್ಷ | ಅಯವ್ಯಯ | | ವೆಚ್ಚ | |
|---|---|---|---|---|
| | ಯೋಜನೆ | ಯೋಜನೇತರ | ಯೋಜನೆ | ಯೋಜನೇತರ |
| 1994-95 | 52,000-00 | 83.54.000-00 | 43.958-00 | 46.12.799-00 |

## ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು

ಸಾರ್ವಜನಿಕ ಆರೋಗ್ಯ ಸಂಸ್ಥೆಯು ರಾಜ್ಯ ಮಟ್ಟದ ಪ್ರಯೋಗಶಾಲೆಯಾಗಿದ್ದು. ಈ ಕೆಳಕಂಡ ಮುಖ್ಯ ವಿಭಾಗಗಳನ್ನು ಹೊಂದಿದ್ದು, ಅದರ ಚಟುವಟಿಕೆಗಳು 1994-95ರಲ್ಲಿ ಈ ರೀತಿ ಇದೆ.

1) ಕಾಲರಾ ನಿರೋಧ ಲಸಿಕೆ ತಯಾರಿಕೆ ಮತ್ತು ಆರೋಗ್ಯ ಮತ್ತು ವೈದ್ಯಕೀಯ ಸಂಸ್ಥೆಗಳಿಗೆ ಸರಬರಾಜು

2) ನಿಬ್ರಿಯೋ ಕಾಲರಾ ತಪಾಸಣೆಯಲ್ಲಿ ಸೂಕ್ಷ್ಮಾಣುಗಳ ಪರೀಕ್ಷೆ

3) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅಡಿಯಲ್ಲಿ ಆಹಾರ ನಮೂನೆಯ ಪರೀಕ್ಷೆ

4) ಅಬಕಾರಿ ಇಲಾಖೆಯಿಂದ ಬರುವ ರಕ್ತ. ಮೂತ್ರದಲ್ಲಿ ಮಧ್ಯಸಾರದ ಪರೀಕ್ಷೆ.

5) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅಡಿಯಲ್ಲಿ ಆಹಾರ ನಮೂನೆಗಳ ಗುಣಮಟ್ಟದ ಪರೀಕ್ಷೆ.

6) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅನುಷ್ಠಾನಕ್ಕೆ ಸಂಬಂಧಿಸಿದ ಚಟುವಟಿಕೆಗಳು.

7) ಕುಡಿಯುವ ನೀರಿನ ರಾಸಾಯನಿಕ ಪರೀಕ್ಷೆ ಹಾಗೂ ಜಲಮಾಲಿನ್ಯ ಮತ್ತು ವಾಯುಮಾಲಿನ್ಯ ನಿಯಂತ್ರಣ ಕಾಯಿದೆಯಲ್ಲಿ ಬರುವ, ಕಾರ್ಖಾನೆಯಿಂದ ಹೊರ ಚೆಲ್ಲಿದ ಜಲ ಮತ್ತು ಅನಿಲಗಳ ಪರೀಕ್ಷೆ.

8) ಅಬಕಾರಿ ಇಲಾಖೆಯಿಂದ ಸಾರ್ವಜನಿಕ ಹಂಚಿಕೆಗೆ ನಿಗಧಿಪಡಿಸಿದ ಮಾದಕ ಪಾನೀಯಗಳ ಗುಣಮಟ್ಟದ ಪರೀಕ್ಷೆ.

9) ಉದ್ದೀಪನ ಮಾದಕ ಪಾನೀಯ ಮತ್ತು ಉದ್ದೀಪನ ಔಷಧಿಗಳ ಪರೀಕ್ಷೆ.

10) ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದ ಅಡಿಯಲ್ಲಿ ಬಳಸುವ ಕೀಟನಾಶಕಗಳ ಗುಣಮಟ್ಟದ ಪರೀಕ್ಷೆ.

11) ಆಸ್ಪತ್ರೆಗಳಲ್ಲಿ ಆರೋಗ್ಯ ಕೇಂದ್ರಗಳಲ್ಲಿ ಹಾಗೂ ವೈದ್ಯಕೀಯ ಸಂಸ್ಥೆಗಳಲ್ಲಿ ಉಪಯೋಗಿಸುವ ರಕ್ತನಾಳದಲ್ಲಿ ಕೊಡುವ ದ್ರವದ ಗುಣಮಟ್ಟದ ಪರೀಕ್ಷೆ.

<u>ಮೇಲಿನ ಚಟುವಟಿಕೆಗಳಿಗಾಗಿ ಸಾರ್ವಜನಿಕ ಆರೋಗ್ಯ ಸಂಸ್ಥೆಯಲ್ಲಿ ಈ ಕೆಳಕಂಡ ವಿಭಾಗಗಳು ಕೆಲಸ ಮಾಡುತ್ತಿವೆ.</u>

1) ಸೂಕ್ಷ್ಮಾಣು ವಿಭಾಗ

2) ರಾಸಾಯನಿಕ ಪರೀಕ್ಷಕರ ವಿಭಾಗ

3) ರಾಜ್ಯ ಆಹಾರ ಪ್ರಯೋಗಾಲಯ

4) ರಾಜ್ಯ ಜಲ ವಿಶ್ಲೇಷಣಾ ಪ್ರಯೋಗಾಲಯ

5) ವಿಭಾಗೀಯ ಸಾರ್ವಜನಿಕ ವಿಶ್ಲೇಷಕರ ಹಾಗೂ ಪ್ರಾದೇಶಿಕ ಸಹಾಯಕ ರಾಸಾಯನಿಕ ಪರೀಕ್ಷಕರ ವಿಭಾಗ.

6) ಕೀಟನಾಶಕಗಳ ಪ್ರಯೋಗಾಲಯ

7) ರಕ್ತನಾಳದಲ್ಲಿ ಕೊಡುವ ಅಂತರ್ನಾಳ ದ್ರವದ ಗುಣಮಟ್ಟದ ನಿಯಂತ್ರಣ ವಿಭಾಗ

8) ಹಿರಿಯ ಪ್ರಯೋಗಾಲಯ ತಂತ್ರಜ್ಞರ ತರಬೇತಿ ವಿಭಾಗ.

1994-95ನೇ ಸಾಲಿನ (ಡಿಸೆಂಬರ್ 94 ಅಂತ್ಯದವರೆಗೆ) ಸಾರ್ವಜನಿಕ ಆರೋಗ್ಯ ಸಂಸ್ಥೆ. ಬೆಂಗಳೂರು. ಇದರ ಸಾಧನೆ ಈ ಕೆಳಕಂಡಂತಿವೆ.

**1) ಸೂಕ್ಷ್ಮಾಣು ವಿಭಾಗ :**

| | | |
|---|---|---|
| ಎ) | ಕಾಲರಾ ನಿರೋಧ ಲಸಿಕೆ ತಯಾರಿಸಿದ್ದು | 48.630 ಎಂ.ಎಲ್ |
| ಬಿ) | ವಿಷಮಶೀತಜ್ವರ ನಿರೋಧಕ ಲಸಿಕೆ | 23.000 ಎಂ.ಎಲ್ |
| ಸಿ) | ಜಲವಿಶ್ಲೇಷಣೆ | 1.0153 |
| ಡಿ) | ಕಾಲರಾ ತಪಾಸಣೆಗಾಗಿ ಬರುವ ನಮೂನೆಗಳ ವಿಶ್ಲೇಷಣೆ | 1.140 |
| ಇ) | ಇತರೆ ವಿಶ್ಲೇಷಣೆ | 53 |

**2) ರಾಸಾಯನಿಕ ಪರೀಕ್ಷಕರ ವಿಭಾಗ :**

| | | |
|---|---|---|
| ಎ) | ಮದ್ಯಸಾರದಿಂದ ಕೂಡಿದ ಔಷಧಿಗಳ ವಿಶ್ಲೇಷಣೆ | 190 |
| ಬಿ) | ಇತರೆ ಸಂಸ್ಥೆಗಳಿಂದ ಪಡೆದ ಮಾದರಿಗಳು | 23 |
| ಸಿ) | ಲೋಕಾಯುಕ್ತರಿಂದ ಲಂಚ ನಿರೋಧ ಕಾಯಿದೆಯಡಿಯಲ್ಲಿನ ನಮೂನೆಗಳ ತಪಾಸಣೆ | 156 |

**3) ರಾಜ್ಯ ಆಹಾರ ವಿಶ್ಲೇಷಣಾ ವಿಭಾಗ :**

1954ರ ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯ ಅಡಿಯಲ್ಲಿ ವಿಶ್ಲೇಷಿಸಿದ ನಮೂನೆಗಳು — 1,023

**4) ವಿಭಾಗೀಯ ಆಹಾರ ಪ್ರಯೋಗಾಲಯ :**

ವಿಶ್ಲೇಷಣೆ ಮಾಡಿರುವ ಮಾದರಿಗಳ ಸಂಖ್ಯೆ — 224

**5) ರಾಜ್ಯ ಜಲ ವಿಶ್ಲೇಷಣಾ ಪ್ರಯೋಗಾಲಯ :**

ವಿಶ್ಲೇಷಣೆ ಮಾಡಿರುವ ಮಾದರಿಗಳ ಸಂಖ್ಯೆ — 802

**6) ಕೀಟನಾಶಕಗಳ ವಿಭಾಗ**

ಕೀಟನಾಶಕಗಳ ಪರೀಕ್ಷೆ ಮಾಡಿದ ನಮೂನೆಗಳು — 173

**7) ತರಬೇತಿ ಹೊಂದಿದ ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಸಂಖ್ಯೆ** — 4

ಈ ಸಂಸ್ಥೆಯ 1994-95ನೇ ಸಾಲಿನ ಅಯವ್ಯಯ ಪಟ್ಟಿ

| | ಅಯವ್ಯಯ (ರೂ. ಗಳಲ್ಲಿ) | ವೆಚ್ಚ (ರೂ. ಗಳಲ್ಲಿ) |
|---|---|---|
| 1) ಯೋಜನೆ | 7,30,000-00 | 2,55,519-00 |
| 2) ಯೋಜನೇತರ | 83.89.000-00 | 51.03.313-00 |
| ಒಟ್ಟು | 91,19,000-00 | 53,58,832-00 |

## ಸರ್ಕಾರಿ ಔಷಧಿ ಮಳಿಗೆ, ಬೆಂಗಳೂರು

ಈ ಸರ್ಕಾರಿ ಔಷಧಿ ಮಳಿಗೆಯು ಕೇಂದ್ರ ಔಷಧಿ ಮಳಿಗೆಯಾಗಿದ್ದು, ಬೆಂಗಳೂರಿನಲ್ಲಿ ಸ್ಥಾಪಿಸಲಾಗಿದೆ.

**ಈ ಮಳಿಗೆಯ ಮುಖ್ಯ ಉದ್ದೇಶಗಳು ಈ ಕೆಳಗಿನಂತಿವೆ :**

1) ನಿಯೋಜಿಸಲಾದ ಅಯವ್ಯಯದಲ್ಲಿ ಸರ್ಕಾರದಿಂದ ಮಾನ್ಯತೆ ಪಡೆದ ದರ ಗುತ್ತಿಗೆದಾರರಿಂದ ಔಷಧಿಗಳನ್ನು, ರಾಸಾಯನಿಕಗಳನ್ನು ಹಾಗೂ ಶಸ್ತ್ರ ಚಿಕಿತ್ಸಾ ವಸ್ತುಗಳನ್ನು ಪಡೆಯಲಾಗುವುದು.

ಅ) ಸಕಾಲದಲ್ಲಿ ಹಾಗೂ ತೀವ್ರಗತಿಯಲ್ಲಿ ಈ ಔಷಧಿ ಮುಂತಾದವುಗಳು ರಾಜ್ಯದ ಎಲ್ಲಾ ಆರೋಗ್ಯ ಕೇಂದ್ರಗಳಿಗೆ ತಲುಪಿಸಲು. ಈ ಮಳಿಗೆಯಲ್ಲಿ ಗಣಕ ಯಂತ್ರಗಳನ್ನು ಅಳವಡಿಸಲಾಗಿದೆ. ತುರ್ತುಪರಿಸ್ಥಿತಿಯಲ್ಲಿ ಅಂದರೆ. ಪ್ರಕೃತಿ ವಿಕೋಪಗಳಾದ ಅತಿವೃಷ್ಟಿ, ಅನಾವೃಷ್ಟಿ ಹಾಗೂ ಭೂಕಂಪ ಮುಂತಾದ ಸಮಯದಲ್ಲಿ ಈ ಸಂದರ್ಭಕ್ಕೆ ಅವಶ್ಯಕವಾಗಿ ಬೇಕಾದಂತಹ ಔಷಧಿಗಳನ್ನು ಈ ಮಳಿಗೆಯಿಂದಲೇ ಸರಬರಾಜು ಮಾಡಲಾಗುತ್ತಿದೆ. ಅಲ್ಲದೆ, ಕುಟುಂಬ ಕಲ್ಯಾಣ. ಅಂಧತ್ವ ನಿವಾರಣೆ, ಕುಷ್ಠರೋಗ ನಿವಾರಣೆ ಮುಂತಾದ ವಿವಿಧ ರಾಷ್ಟ್ರೀಯ ಕಾರ್ಯಕ್ರಮಗಳಡಿಯಲ್ಲಿ ಕಾರ್ಯಕ್ರಮಗಳಿಗಾಗಿ ಔಷಧಿಗಳನ್ನು ಸರಬರಾಜು ಮಾಡಲಾಗುತ್ತಿದೆ.

ಆ) ಸುಮಾರು ಐದು ಕೋಟಿ ರೂಪಾಯಿ ಮೊತ್ತದ ಔಷಧಿಗಳನ್ನು ಸಂಗ್ರಹಿಸಿ ಕಾಯ್ದಿಡಲಾಗಿದೆ. ಅದನ್ನು ತುರ್ತು ಸಂದರ್ಭಗಳಲ್ಲಿ ಅವಶ್ಯಕವಿರುವ ಆರೋಗ್ಯ ಕೇಂದ್ರಗಳಿಗೆ. ಆಸ್ಪತ್ರೆಗಳಿಗೆ ಸಾಂಕ್ರಾಮಿಕ ರೋಗಗಳು ಉಂಟಾದಾಗ. ನೈಸರ್ಗಿಕ ವಿಕೋಪ ಉಂಟಾದಾಗ, ಔಷಧಿಗಳನ್ನು ಸರಬರಾಜು ಮಾಡಲಾಗುವುದು.

2) ಔಷಧಿ. ರಾಸಾಯನಿಕಗಳನ್ನು ಈ ಮಳಿಗೆಯಲ್ಲಿ ಖರೀದಿಸುವ ಮುನ್ನಾ ತೆರಪ್ಯೂಟಿಕ್ ಸಮಿತಿಯಲ್ಲಿ ನಿರ್ಧರಿಸಿದ ಔಷಧಿಗಳನ್ನು ಖರೀದಿಸಲಾಗುವುದು. ನಂತರ ಈ ಬಗ್ಗೆ ಟೆಂಡರ್‌ಗಳನ್ನು ಕರೆದು. ಈ ಔಷಧಿಗಳ ಮೌಲ್ಯ ಹಾಗೂ ಬೆಲೆಗಳನ್ನು ತಜ್ಞರ ಸಮಿತಿಯ ಹಾಗೂ ಹೈಪವರ್ ಕಮಿಟಿಯವರ ನಿರ್ಧಾರದ ನಂತರ ಸರ್ಕಾರದ ಅನುಮೋದನೆ ಪಡೆದ ನಂತರ ಖರೀದಿಸಲಾಗುವುದು.

3) ಔಷಧಿಗಳು ಮುಂತಾದವುಗಳನ್ನು ಆರೋಗ್ಯ ಸಂಸ್ಥೆಗಳಿಗೆ ಸರಬರಾಜು ಮಾಡಲು ಅನುಕೂಲವಾಗುವಂತೆ ಈ ಮಳಿಗೆಯನ್ನು ನಾಲ್ಕು ಉಗ್ರಾಣ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ.

| | |
|---|---|
| 1) ಎ - ಉಗ್ರಾಣ (ಚುಚ್ಚುಮದ್ದುಗಳು) | ಚುಚ್ಚುಮದ್ದುಗಳು ಹಾಗೂ ಸಂಬಂಧಿಸಿದ ವಸ್ತುಗಳನ್ನು ದಾಸ್ತಾನು ಮಾಡಿ ವಿತರಿಸುವ ವಿಭಾಗ |
| 2) ಎ - ಉಗ್ರಾಣ (ಮಾತ್ರೆಗಳು) | ಮಾತ್ರೆಗಳು ಔಷಧಿಗಳ ಕೋಶಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ. |
| 3) ಬಿ - ಉಗ್ರಾಣ | ಔಷಧಿ ಪುಡಿಗಳು. ಮುಲಾಮುಗಳು. ಸೋಂಕು ನಿವಾರಣಾ ಔಷಧಿಗಳು. ಐ.ವಿ. ದ್ರವಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ. |
| 4) ಸಿ ಹಾಗೂ ಡಿ - ಉಗ್ರಾಣ | ಶಸ್ತ್ರ ಚಿಕಿತ್ಸೆಗೆ ಸಂಬಂಧಿಸಿದ ಉಪಕರಣಗಳು. ಗಾಯಕ್ಕೆ ಕಟ್ಟು ಬಟ್ಟೆ. ಹತ್ತಿ. ಹೊಲಿಯುವ ವಸ್ತುಗಳು. ಹವಾನಿಯಂತ್ರಣದಲ್ಲಿ ದಾಸ್ತಾನು ಮಾಡಬೇಕಾಗಿರುವ ಔಷಧಿಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ. |

---

1993-94ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಅನುದಾನ ಹಾಗೂ ಸರಬರಾಜು ಮಾಡಲ್ಪಟ್ಟ ವೆಚ್ಚದ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| | ಬಿಡುಗಡೆಯಾದ ಅನುದಾನ ರೂ. ಗಳಲ್ಲಿ | ವೆಚ್ಚ ರೂ. ಗಳಲ್ಲಿ |
|---|---|---|
| 1) ವೈದ್ಯಕೀಯ ಶಿಕ್ಷಣ | 6.28.27,800-00 | 6,27.64.039-00 |
| 2) ಆರೋಗ್ಯ | 13.50.03.600-00 | 10.28.21.956-00 |
| 3) ಕುಟುಂಬ ಕಲ್ಯಾಣ ಯೋಜನೆ | 69.56.000-00 | 12.34.815-00 |

## ಆರೋಗ್ಯ ಉಪಕರಣಗಳ ದುರಸ್ಥಿ ಮತ್ತು ನಿರ್ವಹಣೆಯ ಘಟಕ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಆರೋಗ್ಯ ಸಲಕರಣೆಗಳ ದುರಸ್ತಿ ಮತ್ತು ನಿರ್ವಹಣೆ ಘಟಕವು ಆರೋಗ್ಯ ಉಪಕರಣಗಳ ಅಧಿಕಾರಿಯ ನೇತೃತ್ವದಲ್ಲಿ ನಿರ್ದೇಶನಾಲಯದಡಿಯಲ್ಲಿ ಬರುವ ಎಲ್ಲಾ ಆಸ್ಪತ್ರೆಯ ಉಪಕರಣಗಳ ದುರಸ್ತಿ ಕಾರ್ಯ ಹಾಗೂ ನಿರ್ವಹಣೆಯ ಕಾರ್ಯವನ್ನು ನಿರ್ವಹಿಸುತ್ತಿದೆ.

1994-95ನೇ ಸಾಲಿನಲ್ಲಿ (ಡಿಸೆಂಬರ್ 94ರ ಅಂತ್ಯದವರೆಗೆ) 32 ಕ್ಷ-ಕಿರಣ ಯಂತ್ರಗಳನ್ನು ದುರಸ್ಥಿಗೊಳಿಸಲಾಗಿದೆ.

## ರಾಜ್ಯ ಆರೋಗ್ಯದ ಸಾರಿಗೆ ಸಂಸ್ಥೆ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಎಲ್ಲಾ ಕಾರ್ಯಕ್ರಮಗಳು ಸರಾಗವಾಗಿ ನಡೆಯುವಂತೆ ಸಾರಿಗೆ ವ್ಯವಸ್ಥೆಯನ್ನು ಒದಗಿಸುವುದೇ ಈ ಸಂಸ್ಥೆಯ ಮುಖ್ಯ ಉದ್ದೇಶವಾಗಿದೆ. ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯಕ್ಕೆ ಸಂಬಂಧಿಸಿದ ವಾಹನಗಳ ದುರಸ್ಥಿಯ ಕಾರ್ಯವನ್ನು ಸಹ ನೋಡಿಕೊಳ್ಳುವ ಹೊಣೆಯನ್ನುಹೊತ್ತಿದೆ.

ನಿರ್ದೇಶನಾಲಯಕ್ಕೆ ಹೊಂದಿಕೊಂಡಿರುವ ಕೇಂದ್ರೀಯ ಕಾರ್ಯಾಗಾರದಲ್ಲಿ ಜೀಪುಗಳಿಗೆ ಮಾತ್ರ ಪೈಂಟಿಂಗ್ ಕೆಲಸ ಕೈಗೊಳ್ಳಲಾಗಿದೆ ಮತ್ತು ಎಲ್ಲಾ ತರಹದ ವಾಹನಗಳ ದುರಸ್ಥಿಗಳನ್ನು ಈ ಸಂಸ್ಥೆಯು ನಿರ್ವಹಿಸುತ್ತಿದೆ.

ಇದಲ್ಲದೆ ರಾಜ್ಯದಲ್ಲಿ 18 ಜಿಲ್ಲಾ ಮುಖ್ಯಸ್ಥಳಗಳಲ್ಲಿ (ಬೆಂಗಳೂರು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಹೊರತುಪಡಿಸಿ) 18 ದುರಸ್ಥಿ ಘಟಕಗಳಿರುತ್ತವೆ. ಈ ಘಟಕಗಳಲ್ಲಿ ಆಯಾ ಜಿಲ್ಲೆಗಳಲ್ಲಿರುವ ವಾಹನಗಳ ದೊಡ್ಡ ಹಾಗೂ ಸಣ್ಣ ದುರಸ್ಥಿಗಳ ಕಾರ್ಯಗಳನ್ನು ಕೈಗೊಂಡಿದೆ. ಈ ಘಟಕಗಳ ಜಿಲ್ಲಾ ಪರಿಷತ್‌ನ ಅಧಿಕಾರಕ್ಕೊಳಪಟ್ಟು ಕೆಲಸ ನಿರ್ವಹಿಸುತ್ತಿದೆ. ಅಲ್ಲದೆ ಭಾರತೀಯ ಜನಸಂಖ್ಯಾ ಯೋಜನೆ - 3 (ಕರ್ನಾಟಕ) ಯಡಿಯಲ್ಲಿ ಸ್ಥಾಪಿಸಿರುವ ಗುಲ್ಬರ್ಗಾ ಮತ್ತು ಹುಬ್ಬಳ್ಳಿಯಲ್ಲಿರುವ ಕಾರ್ಯಾಗಾರದಲ್ಲಿ ಗುಲ್ಬರ್ಗಾ ಮತ್ತು ಬೆಳಗಾಂ ವಿಭಾಗಗಳ ವ್ಯಾಪ್ತಿಯಲ್ಲಿ ಬರುವ ವಾಹನಗಳ ದುರಸ್ಥಿ ಕಾರ್ಯವನ್ನು ಕೈಗೊಳ್ಳಲಾಗಿದೆ.

1994-95ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರವು 14 ತುರ್ತು ವಾಹನಗಳನ್ನು ಜಿಲ್ಲಾ ಆಸ್ಪತ್ರೆಗಳಿಗೆ ಒದಗಿಸಿದೆ ಮತ್ತು ಭಾರತ ಸರ್ಕಾರವು ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕಾಗಿ 10 ಜೀಪುಗಳನ್ನು ಒದಗಿಸಿದೆ.

ರಾಜ್ಯ ಸರ್ಕಾರವು ಕುಷ್ಠರೋಗ ನಿರ್ಮೂಲನಾ ನಿಯಂತ್ರಣ ಕಾರ್ಯಕ್ರಮಕ್ಕಾಗಿ ಮತ್ತು ಅಂಧತ್ವ ನಿವಾರಣಾ ಕಾರ್ಯಕ್ರಮಕ್ಕಾಗಿ 4 ಮೆಟಡಾರ್ ವಾಹನಗಳನ್ನು ಸರಬರಾಜು ಮಾಡಿದೆ.

1994-95ನೇ ಸಾಲಿನಲ್ಲಿ ನಿರ್ದೇಶನಾಲಯದಲ್ಲಿದ್ದ 109 ಅನುಪಯುಕ್ತ ವಾಹನಗಳನ್ನು ವಿಲೇವಾರಿ ಮಾಡಲಾಗಿದೆ. 31-12-1994ರಂದು ಇಲಾಖೆಯಲ್ಲಿದ್ದ ಒಟ್ಟು ವಾಹನಗಳ ಸಂಖ್ಯೆ 1576 ಇದ್ದು. ಇದರಲ್ಲಿ 1069 ವಾಹನಗಳು ಚಲನ ಸ್ಥಿತಿಯಲ್ಲಿ ಮತ್ತು 507 ವಾಹನಗಳು ಅಚಲನ ಸ್ಥಿತಿಯಲ್ಲಿ ಇರುತ್ತವೆ.

ದಿನಾಂಕ 1-1-1995 ರಲ್ಲಿದ್ದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಸಿಬ್ಬಂದಿ ವಿವರ :

| ಪಂಗಡ | ಮಂಜೂರಾದ ಹುದ್ದೆಗಳು | ಕೆಲಸ ಮಾಡುತ್ತಿರು-ವವರ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|
| ಎ | 4751 | 4055 | 696 |
| ಬಿ | 376 | 257 | 119 |
| ಸಿ | 36298 | 30818 | 5480 |
| ಡಿ | 15595 | 12983 | 2612 |
| ಒಟ್ಟು | 57020 | 48113 | 8907 |

# ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ

## 1994-95ನೇ ಸಾಲಿನ ವಾರ್ಷಿಕ ವರದಿ

**ಪರಿಚಯ :**

1908ರಲ್ಲಿ ವೈದ್ಯಕೀಯ ವೃತ್ತಿಗೆ ಪರವಾನಗಿ ನೀಡಲು ಒಂದು ವೈದ್ಯಕೀಯ ಶಾಲೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. ರಾಜ್ಯದಲ್ಲಿ ಮೊದಲ ಬಾರಿಗೆ ವೈದ್ಯಕೀಯ ಪದವೀಧರ ತರಬೇತಿ ಪಡೆಯಲು 1924ರಲ್ಲಿ ಒಂದು ಖಾಸಗೀ ವೈದ್ಯಕೀಯ ಕಾಲೇಜನ್ನು ಬೆಂಗಳೂರಿನಲ್ಲಿ ತೆರೆಯಲಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಅಡಿಯಲ್ಲಿ ತೆರೆಯಲಾಯಿತು. ಈ ವೈದ್ಯಕೀಯ ವಿದ್ಯಾಲಯವನ್ನು 1958ರಲ್ಲಿ ಸರ್ಕಾರದ ಅಧೀನಕ್ಕೆ ಪಡೆದುಕೊಂಡು ರಾಜ್ಯ ಸರ್ಕಾರದ ವೈದ್ಯಕೀಯ ಇಲಾಖೆಗೆ (100 ಅಭ್ಯರ್ಥಿಗಳ ಪ್ರವೇಶಾವಕಾಶದೊಂದಿಗೆ) ವಹಿಸಲಾಯಿತು.

1955ರಲ್ಲಿ ಇನ್ನೊಂದು ಖಾಸಗೀ ವೈದ್ಯಕೀಯ ಕಾಲೇಜನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಲಾಯಿತು. ಅದನ್ನು 1957ರಲ್ಲಿ ಸರ್ಕಾರದ ಅಧೀನಕ್ಕೆ ಒಳಪಡಿಸಲಾಯಿತು. 1960ರಲ್ಲಿ ಹುಬ್ಬಳ್ಳಿಯಲ್ಲಿ ಒಂದು ವೈದ್ಯಕೀಯ ವಿದ್ಯಾಲಯವನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ಅಧೀನದಲ್ಲಿ ಸರ್ಕಾರದಿಂದ (100 ಅಭ್ಯರ್ಥಿಗಳ ಪ್ರವೇಶಾವಕಾಶ) ಪ್ರಾರಂಭಿಸಲಾಯಿತು. 1961-62ರಲ್ಲಿ ಬಳ್ಳಾರಿಯಲ್ಲಿ ಮತ್ತೊಂದು ವೈದ್ಯಕೀಯ ವಿದ್ಯಾಲಯವನ್ನು ಸರ್ಕಾರದ ವತಿಯಿಂದ 75 ಅಭ್ಯರ್ಥಿಗಳ ಪ್ರವೇಶಾವಕಾಶಗಳೊಂದಿಗೆ ಪ್ರಾರಂಭಿಸಲಾಯಿತು. 1958ರಲ್ಲಿ ಬೆಂಗಳೂರಿನಲ್ಲಿ ಒಂದು ಸರ್ಕಾರೀ ದಂತ ವಿದ್ಯಾಲಯವನ್ನು (10 ಪ್ರವೇಶಾವಕಾಶ) ಪ್ರಾರಂಭಿಸಲಾಯಿತು. ಹಾಲೀ ಈಗ 70 ಅಭ್ಯರ್ಥಿಗಳಿಗೆ ಪ್ರವೇಶ ಒದಗಿಸಲಾಗಿದೆ. 1971ರಲ್ಲಿ ಬೆಂಗಳೂರಿನಲ್ಲಿ ಒಂದು ನರ್ಸಿಂಗ್ ಕಾಲೇಜನ್ನು ( ಬಿ. ಎಸ್ಸಿ, ನರ್ಸಿಂಗ್) ಸರ್ಕಾರದಿಂದ ನಡೆಸಲು ಮಂಜೂರಾತಿ ಪಡೆದು ಈ ಇಲಾಖೆಯ ಅಧೀನದಲ್ಲಿ ಪ್ರಾರಂಭಿಸಲಾಯಿತು. ಈಗ ರಾಜ್ಯ ನಾಲ್ಕು (4) ಸರ್ಕಾರೀ ವೈದ್ಯಕೀಯ ಮಹಾವಿದ್ಯಾಲಯಗಳೂ, ಹದಿನೆಂಟು (18) ಖಾಸಗೀ ವೈದ್ಯಕೀಯ ಮಹಾವಿದ್ಯಾಲಯಗಳು ನಡೆಸಲ್ಪಡುತ್ತಿವೆ.

ವೈದ್ಯಕೀಯ ಶಿಕ್ಷಣದ ಅಭಿವೃದ್ಧಿ. ಉನ್ನತ ಶಿಕ್ಷಣ ಮತ್ತು ಸುಧಾರಿಸಿದ ವೈದ್ಯಕೀಯ ಸೇವೆಗಳ ಅಭಿವೃದ್ಧಿಗಾಗಿ ಸರ್ಕಾರವು ಒಂದು ಪ್ರತ್ಯೇಕ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯವನ್ನು 1978ರ ನವೆಂಬರ್ ಮಾಹೆಯಲ್ಲಿ ರಚಿಸಲಾಯಿತು. ಹಾಗೂ ಒಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರ ಹುದ್ದೆಯನ್ನು ಮಂಜೂರು ಮಾಡಲಾಯಿತು. ಈ ವೈದ್ಯಕೀಯ ಶಿಕ್ಷಣ ಇಲಾಖೆಯ ನಿರ್ದೇಶಕರು. ವೈದ್ಯಕೀಯ ಶಿಕ್ಷಣ. ದಂತ ಶಿಕ್ಷಣ. ಶುಶ್ರೂಷಾ ದಾದಿಯರ ಮಹಾವಿದ್ಯಾಲಯ. ದಾದಿಯರ ಶಾಲೆಗಳು, ಮತ್ತು ವೈದ್ಯಕೀಯ ಮಹಾವಿದ್ಯಾಲಯಗಳಿಗೆ ಹೊಂದಿಕೊಂಡಿರುವ ಬೋಧಕ ಆಸ್ಪತ್ರೆಗಳ ಮೇಲ್ವಿಚಾರಕರಾಗಿರುತ್ತಾರೆ.

1994-95ನೇ ಸಾಲಿನಲ್ಲಿ ವೈದ್ಯಕೀಯ ಪದವಿ ಪೂರ್ವ ಶಿಕ್ಷಣ (ಎಂ. ಬಿ.ಬಿ.ಎಸ್) ಸ್ನಾತಕೋತ್ತರ ಪದವೀ ಶಿಕ್ಷಣ. ಡಿಪ್ಲೋಮಾ ಪದವೀ ಶಿಕ್ಷಣ ಶುಶ್ರೂಷಾ ದಾದಿಯರ ಪದವಿ ಶಿಕ್ಷಣ. ತರಬೇತಿ ಶಿಕ್ಷಣದ ವೃತ್ತಿಪರ ಕೋರ್ಸುಗಳ ಸವಿವರಣೆಗಳನ್ನು ಅನುಬಂಧ -1 ರಲ್ಲಿ ಸೂಚಿಸಿ ಇದರಡಿ ಲಗತ್ತಿಸಲಾಗಿದೆ.

ಈ ಕೆಳಕಂಡ ಅಧಿಕಾರಿಗಳು ಈ ಇಲಾಖೆಯ ತಾಂತ್ರಿಕ ವಿಷಯಕ್ಕೆ ಸಂಬಂಧಿಸಿದ ಆಡಳಿತ ವಿಷಯಕ್ಕೆ ಸಂಬಂಧಿಸಿದ ಲೆಕ್ಕ ಪತ್ರಗಳನ್ನು ಹಣಕಾಸಿನ ವಿಷಯಗಳು ಮತ್ತು ಯೋಜನೆಗಳ ವಿಷಯದಲ್ಲಿ ಸಲಹೆಗಳನ್ನು ನೀಡಲು ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ :

1. ಉಪನಿರ್ದೇಶಕರು (ವೈಶಿ)
2. ಮುಖ್ಯ ಆಡಳಿತಾಧಿಕಾರಿ (ವೈಶಿ)
3. ಮುಖ್ಯ ಲೆಕ್ಕಪತ್ರಾಧಿಕಾರಿ ಹಾಗೂ ಆರ್ಥಿಕ ಸಲಹೆಗಾರರು (ವೈಶಿ)
4. ಆಡಳಿತಾಧಿಕಾರಿ (ವೈಶಿ)
5. ಯೋಜನಾಧಿಕಾರಿ (ವೈಶಿ)
6. ಆರೋಗ್ಯ ಉಪಕರಣಗಳ ಅಧಿಕಾರಿ
7. ಹಿರಿಯ ಸಹಾಯಕ ನಿರ್ದೇಶಕರು (ನರ್ಸಿಂಗ್)
8. ಉಪ ನಿರ್ದೇಶಕರು (ಸಾರಿಗೆ)

ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ನಿಯಂತ್ರಣದಲ್ಲಿ 10.402 ಹಾಸಿಗೆ ಸೌಲಭ್ಯಗಳುಳ್ಳ 21 ಬೋಧಕ ಆಸ್ಪತ್ರೆಗಳೂ. ಸರ್ಕಾರೀ ವೈದ್ಯಕೀಯ ವಿದ್ಯಾಲಯಗಳಿಗೆ ಹೊಂದಿಕೊಂಡಿರುವ 4 ಗ್ರಾಮೀಣ ಆರೋಗ್ಯ ತರಬೇತಿ ಕೇಂದ್ರಗಳು ಮತ್ತು 12 ಉಪ ಆರೋಗ್ಯ ಕೇಂದ್ರಗಳು. 10 'ಎ' ಮಾದರಿ ಬಾಣಂತೀ ಸೇವಾ ಕೇಂದ್ರಗಳೂ. 14 ನಗರ ಕುಷ್ಠರೋಗ ಹತೋಟಿ ಕೇಂದ್ರಗಳು. 3 ಪುನಶ್ಚೇತನ ಕುಷ್ಠರೋಗ ಶಸ್ತ್ರ ಚಿಕಿತ್ಸಾ ಘಟಕಗಳೂ. 6 ತಾತ್ಕಾಲಿಕ 20 ಹಾಸಿಗೆಗಳುಳ್ಳ ಕುಷ್ಠರೋಗ ವಿಭಾಗದ ವಾರ್ಡುಗಳು. 9 ಮನೋರೋಗ ಚಿಕಿತ್ಸಾಲಯಗಳೂ, 15 ದಂತ ಚಿಕಿತ್ಸಾ ಘಟಕಗಳೂ. 9 ಸಂಚಾರೀ ರೋಂ ಆಸ್ಪತ್ರೆಗಳೂ 27 ಸಂಚಾರಿ ರೋಂ ಚಿಕಿತ್ಸಾ ಕೇಂದ್ರಗಳು (ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಸೇರಿದ) ಕಾರ್ಯ ನಿರ್ವಹಿಸುತ್ತಿವೆ.

ಈ ಕೆಳಗೆ ಸೂಚಿಸಲಾದ ವಿಶೇಷ ಚಿಕಿತ್ಸಾ ವಿಭಾಗಗಳು ಸುಸಜ್ಜಿತ ಹಾಗೂ ಅತ್ಯಾಧುನಿಕ ಉಪಕರಣಗಳ ಸೌಲಭ್ಯಗಳನ್ನು ಒಳಗೊಂಡಿರುತ್ತವೆ.

1. ರೇಡಿಯಾಲಜಿ(ಕ್ಷ- ಕಿರಣ ಚಿಕಿತ್ಸಾ ವಿಭಾಗ)
2. ದಂತ ಚಿಕಿತ್ಸೆ ಯಂತ್ರಕಾರರ ಮತ್ತು ದಂತ ನೈರ್ಮಲ್ಯಕಾರರ ವಿಶೇಷ ವಿಭಾಗ
3. ಶಿಶು ಸಂರಕ್ಷಣಾ ವಿಭಾಗ
4. ನೇತ್ರ ಚಿಕಿತ್ಸಾ ವಿಭಾಗ

5. ಚರ್ಮರೋಗ ಚಿಕಿತ್ಸಾ-ಲೈಂಗಿಕ ರೋಗ ಚಿಕಿತ್ಸಾ ವಿಭಾಗ

6. ಕಿವಿ, ಮೂಗು ಮತ್ತು ಗಂಟಲು ಚಿಕಿತ್ಸಾ ವಿಭಾಗ

7. ಅಸ್ಥಿ ಚಿಕಿತ್ಸಾ ವಿಭಾಗ

8. ಸುಟ್ಟಗಾಯಗಳ ಹಾಗೂ ತುರ್ತುಚಿಕಿತ್ಸಾ ವಿಭಾಗ

9. ಅರವಳಿಕೆ (ಅನೆಸ್ಥೇನಿಯಾ) ಚಿಕಿತ್ಸಾ ವಿಭಾಗ

10. ಪ್ರಯೋಗಾಲಯಗಳ ಆಧುನಿಕರಣತೆ (ರೋಗ ನಿಧಾನ ಶಾಸ್ತ್ರ ಮತ್ತು ವಿಕಾಣು ಜೀವಿಶಾಸ್ತ್ರ)

11. ರಕ್ತನಿಧಿಗಳ ಆಧುನೀಕರಣತೆ

12. ಶ್ವಾಸಕೋಶದ ಶಸ್ತ್ರಚಿಕಿತ್ಸಾ ವಿಭಾಗ

13. ವೈದ್ಯಕೀಯ ದಾಖಲಾತಿ ವಿಭಾಗ

14. ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ

15. ಅಂತರ್ನಾಳ ದ್ರವ ತಯಾರಿಕಾ ವಿಭಾಗ

16. ಶೀಘ್ರ ಅರ್ಬುದ ರೋಗ ಪತ್ತೆ ಕೇಂದ್ರ

17. ಹೃದ್ರೋಗ ಚಿಕಿತ್ಸಾ ವಿಶೇಷ ವಿಭಾಗ

18. ಗಾಯಾಳು ಶುಶ್ರೂಷಾ ಘಟಕ

ಅರೆವೈದ್ಯಕೀಯ ತರಬೇತಿ ಕೇಂದ್ರಗಳು

1. ದಾದಿಯರ ತರಬೇತಿ ಶಾಲೆಗಳು 10

2. ಕಿರಿಯ ಆರೋಗ್ಯ ಸಹಾಯಕಿಯರ ಶಾಲೆಗಳು 5

3. ಮಹಿಳಾ ಆರೋಗ್ಯ ಸಂದರ್ಶಿಕಿಯರ ತರಬೇತಿ ಕೇಂದ್ರಗಳು 4

4. ಕ್ಷ - ಕಿರಣಗಳ ತಂತ್ರಜ್ಞರ ತರಬೇತಿ

5. ಪ್ರಯೋಗಶಾಲಾ ತಂತ್ರಜ್ಞರ ತರಬೇತಿ

6. ಅಂಗವಿಕಲ ಚಿಕಿತ್ಸಕರ ತರಬೇತಿ

7. ನಯನ ಚಿಕಿತ್ಸಾ : ನೇತ್ರಾ ಚಿಕಿತ್ಸಾ ಸಹಾಯಕರ ತರಬೇತಿ

8. ದಂತ ಚಿಕಿತ್ಸಾ ಯಂತ್ರಕಾರ ಹಾಗೂ ದಂತ ನೈರ್ಮಲ್ಯಕಾರರ ತರಬೇತಿ

**ಸ್ವಾಯತ್ತ ಸಂಸ್ಥೆಗಳು :**

ಈ ಕೆಳಕಂಡ ಸ್ವಾಯತ್ತ ಸಂಸ್ಥೆಗಳು ಸರ್ಕಾರದಿಂದ ಸಹಾಯಾನುದಾನವನ್ನು ಪಡೆಯುತ್ತಿವೆ. 1994-95 ಸಾಲಿನಲ್ಲಿ 875.00 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

| | | |
|---|---|---|
| 1. | ಬೆಂಗಳೂರಿನ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ | - 150.00 ಲಕ್ಷ |
| 2. | ಕಿದ್ವಾಯಿ ಸ್ಮಾರಕ ಅರ್ಬುದ ರೋಗ ಸಂಸ್ಥೆ, ಬೆಂಗಳೂರು | - 200. 00 ಲಕ್ಷ |
| 3. | ಶ್ರೀ ಜಯದೇವ ಹೃದ್ರೋಗ ಸಂಸ್ಥೆ. ಬೆಂಗಳೂರು | - 325.00 ಲಕ್ಷ |
| 4. | ಇಂದಿರಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ. ಬೆಂಗಳೂರು | - 175.00 ಲಕ್ಷ |
| 5. | ಆರೋಗ್ಯ ವಿಜ್ಞಾನದ ವಿಶ್ವವಿದ್ಯಾಲಯ, ಬೆಂಗಳೂರು | - 25.00 ಲಕ್ಷ |

**1. ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ, ಬೆಂಗಳೂರು :**

ಈ ಸಂಸ್ಥೆಯು ರಾಷ್ಟ್ರದಲ್ಲಿ ಪ್ರಥಮ ಮಾನಸಿಕ ಆರೋಗ್ಯ ಹಾಗೂ ನರವಿಜ್ಞಾನ ಸಂಸ್ಥೆಯಾಗಿದೆ. ಇದು ವಿವಿಧ ವಿಷಯಗಳಲ್ಲಿ ಪದವಿ, ಡಿಪ್ಲೊಮಾ. ಹಾಗೂ ಸ್ನಾತಕೋತ್ತರ ಪದವಿ ತರಗತಿಗಳನ್ನು ನಡೆಸುತ್ತಲಿದೆ. ರಾಷ್ಟ್ರದಲ್ಲಿ ಕಡೆಗಣಿಸಿರುವ ಮಾನಸಿಕ ಆರೋಗ್ಯದ ಬಗ್ಗೆ ತಿಳುವಳಿಕೆ ನೀಡುವ ಸಲುವಾಗಿ ಚರ್ಚಾಕೂಟಗಳನ್ನು ಹಾಗೂ ತರಬೇತಿ ಶಿಬಿರಗಳನ್ನು ಏರ್ಪಡಿಸುತ್ತಿದೆ. ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಜಿಲ್ಲಾ ಮಟ್ಟದಲ್ಲಿ ಕಾರ್ಯಗತ ಮಾಡಲು ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮಗಳನ್ನು ವಿಸ್ತರಿಸಲು ಸೂಕ್ತ ಕಾರ್ಯಕ್ರಮವನ್ನು ತಯಾರಿಸಲು ಹಮ್ಮಿಕೊಂಡಿದೆ.

**2. ಕಿದ್ವಾಯಿ ಸ್ಮಾರಕ ಅರ್ಬುದ ರೋಗ ಸಂಸ್ಥೆ, ಬೆಂಗಳೂರು :**

ಇದು ದಕ್ಷಿಣ ಭಾರತದ ನಾಲ್ಕು ರಾಜ್ಯಗಳಿಗಾಗಿಯೇ ಇರುವ ಒಂದು ಪ್ರಾಂತೀಯ ಸಂಸ್ಥೆ ಆಗಿದೆ. ಈ ಸಂಸ್ಥೆಯಲ್ಲಿ 450 ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಲಾಗಿದೆ. ಈ ಸಂಸ್ಥೆಯಲ್ಲಿ ರೇಡಿಯೇಷನ್ ಪ್ಲಾಂಟು ಇದ್ದು ಅರ್ಬುದ ರೋಗ ತಪಾಸಣೆ ಹಾಗೂ ಚಿಕಿತ್ಸೆಗಾಗಿ ಅತ್ಯಾಧುನಿಕ ವೈದ್ಯಕೀಯ ಉಪಕರಣಗಳನ್ನು ಹೊಂದಿದೆ. ಇಲ್ಲಿನ ಧರ್ಮಶಾಲಾ ಎಂಬ ವಿನೂತನ ಯೋಜನೆಯಲ್ಲಿ ಅನುಕ್ರಮವಾಗಿ 200 ಅರ್ಬುದ ರೋಗಿಗಳು ಹಾಗೂ 200 ರೋಗಿಗಳ ಸಹಾಯಕರುಗಳಿಗೆ ವಾಸಸ್ಥಳ. ಅಡುಗೆ ಶಾಲೆ : ಭೋಜನ ವ್ಯವಸ್ಥೆಗೆ ಅವಕಾಶವನ್ನು ಕಲ್ಪಿಸಿ ಕೊಡಲಾಗಿದೆ. ಈ ಸಂಸ್ಥೆಯು ಬೆಂಗಳೂರು. ಬಳ್ಳಾರಿ ಹಾಗೂ ಗುಲ್ಬರ್ಗ ವೈದ್ಯಕೀಯ ಕಾಲೇಜುಗಳ ಪದವಿಪೂರ್ವ ಹಾಗೂ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಮಾನ್ಯತೆಯನ್ನು ಪಡೆದಿರುತ್ತದೆ.

**3. ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು :**

ಈ ಸಂಸ್ಥೆಯು ಅತ್ಯಾಧುನಿಕ ವೈದ್ಯಕೀಯ ಉಪಕರಣಗಳನ್ನು ಹೊಂದಿದ ಒಂದು ಸುಸಜ್ಜಿತವಾದ ಸಂಸ್ಥೆ. ಇಲ್ಲಿ ಹೃದ್ರೋಗ ಚಿಕಿತ್ಸೆ ಹಾಗೂ ಹೃದ್ರೋಗ ಶಸ್ತ್ರಚಿಕಿತ್ಸೆ ಬಗ್ಗೆ ವ್ಯಾಸಂಗ ಮಾಡುವ ಪದವಿ ಪೂರ್ವ ಹಾಗೂ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ತರಬೇತಿ ನೀಡುವ ವಿಶೇಷ ಸಂಸ್ಥೆಯಾಗಿದೆ. ಇಲ್ಲಿ ಈಕೋಕಾರ್ಡಿಯಾಲಜಿ ಮತ್ತು ಕಂಪ್ಯೂಟರ್ ಥ್ರೆಡಮಿಲಿ ಸಿಸ್ಟಮ್ ವ್ಯವಸ್ಥೆಯನ್ನು ಅಳವಡಿಸಲಾಗಿದೆ.

**4. ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು :**

ಬೆಂಗಳೂರಿನ ವಾಣೀವಿಲಾಸ ಆಸ್ಪತ್ರೆಯ ಮಕ್ಕಳ ಚಿಕಿತ್ಸಾ ವಿಭಾಗದ ಜೊತೆಗೆ, ಹೊಸೂರು ರಸ್ತೆಯಲ್ಲಿ ಪ್ರತ್ಯೇಕವಾಗಿ ಒಂದು ನೂತನ ವಿಭಾಗವನ್ನು ಸ್ವಯತ್ತ ಸಂಸ್ಥೆಯಾಗಿ ಬೆಂಗಳೂರು ಶಿಶು ಆರೋಗ್ಯ ಕಲ್ಯಾಣಕ್ಕಾಗಿ 50 ಹಾಸಿಗೆಗಳ ಸೌಲಭ್ಯವನ್ನು ಹೊರ ರೋಗಿಗಳ ವಿಶೇಷ ವಿಭಾಗವನ್ನು ತೆರೆಯಲಾಗಿದೆ. ಇಲ್ಲಿ ಅತ್ಯಾಧುನಿಕ ವೈದ್ಯಕೀಯ ಉಪಕರಣಗಳನ್ನು ಅಳವಡಿಸಿ ಮಕ್ಕಳ ಆರೋಗ್ಯದ ಬಗ್ಗೆ ವೈದ್ಯಕೀಯ ಸಂಶೋಧನೆಯನ್ನು ನಡೆಸಲು ಅವಕಾಶ ಕಲ್ಪಿಸಲಾಗಿದೆ.

ವೈದ್ಯಕೀಯ ಶಿಕ್ಷಣದ ನಿರ್ದೇಶನಾಲಯದ ಅಡಿಯಲ್ಲಿ ಬರುವ ವೈದ್ಯಕೀಯ ಮಹಾ ವಿದ್ಯಾಲಯಗಳಿಗೆ ಹೊಂದಿಕೊಂಡಿರುವ ಬೋಧಕ ಆಸ್ಪತ್ರೆಗಳ ವಿವರ :

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
2. ವಾಣೀವಿಲಾಸ ಆಸ್ಪತ್ರೆ, ಬೆಂಗಳೂರು
3. ಮಿಂಟೋ ಕಣ್ಣಾಸ್ಪತ್ರೆ, ಬೆಂಗಳೂರು
4. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು
5. ಚಿತ್ತರಂಜನ್‌ದಾಸ್ ಜನ್ಮ ಶತಾಬ್ಧಿ ಸ್ಮಾರಕ ಸಂಚಾರಿ ಆಸ್ಪತ್ರೆ, ಬೆಂಗಳೂರು
6. ಶಾಂತಾಬಾಯಿ ದೇವರಾಮ ಶಿವರಾಂ ಕ್ಷಯ ಮತ್ತು ಎದೆ ರೋಗಿಗಳ ಆಸ್ಪತ್ರೆ, ಬೆಂಗಳೂರು

**ಅ. ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು :**

7. ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು
8. ಶ್ರೀ ಚೆಲುವಾಂಬಾ ಆಸ್ಪತ್ರೆ, ಮೈಸೂರು
9. ರಾಜಕುಮಾರಿ ಕೃಷ್ಣರಾಜಮ್ಮಣ್ಣಿ ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ, ಮೈಸೂರು

**ಇ. ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಹುಬ್ಬಳ್ಳಿ :**

10. ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ
11. ಮಾನಸಿಕ ರೋಗ ಆಸ್ಪತ್ರೆ, ಧಾರವಾಡ

ಈ. ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ :

12. ಜಿಲ್ಲಾ ಆಸ್ಪತ್ರೆ, ಬಳ್ಳಾರಿ

13. ವೈದ್ಯಕೀಯ ಕಾಲೇಜು ಆಸ್ಪತ್ರೆ, ಬಳ್ಳಾರಿ

14. ಸರ್ಕಾರೀ ವೆಲ್ಲೆಸ್ಲಿ ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ, ಬಳ್ಳಾರಿ

ಉ. ಮಣಿಪಾಲ ವೈದ್ಯಕೀಯ ಕಾಲೇಜು, ಮಂಗಳೂರು :

15. ಸರ್ಕಾರೀ ವೆಲ್ಲೆಸ್ಲಿ ಜಿಲ್ಲಾ ಆಸ್ಪತ್ರೆ, ಮಂಗಳೂರು

16. ಲೇಡಿ ಘೋಷನ್ ಆಸ್ಪತ್ರೆ, ಮಂಗಳೂರು

ಊ. ಜೆ.ಜೆ.ಎಂ. ವೈದ್ಯಕೀಯ ಮಹಾವಿದ್ಯಾಲಯ, ದಾವಣಗೆರೆ :

17. ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ

18. ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ

19. ಸರ್ಕಾರೀ ಕ್ಷಯ ಮತ್ತು ಎದೆ ರೋಗಿಗಳ ಆಸ್ಪತ್ರೆ, ದಾವಣಗೆರೆ

ಋ. ಜವಹರಲಾಲ್ ನೆಹರೂ ವೈದ್ಯಕೀಯ ಕಾಲೇಜು, ಬೆಳಗಾವಿ :

20. ಜಿಲ್ಲಾ ಆಸ್ಪತ್ರೆ, ಬೆಳಗಾವಿ

ೠ. ಮಹದೇವಪ್ಪ ರಾಮಪುರ ವೈದ್ಯಕೀಯ ಕಾಲೇಜು, ಗುಲ್ಬರ್ಗ :

21. ಜಿಲ್ಲಾ ಆಸ್ಪತ್ರೆ, ಗುಲ್ಬರ್ಗ

ರಾಜ್ಯ ಸರ್ಕಾರದಿಂದ ನಡೆಸಲ್ಪಡುತ್ತಿರುವ ದಾದಿಯರ ತರಬೇತಿ ಶಾಲೆಗಳು :

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು
3. ಕೆ. ಆರ್. ಆಸ್ಪತ್ರೆ, ಮೈಸೂರು
4. ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ
5. ವೈದ್ಯಕೀಯ ಕಾಲೇಜು ಆಸ್ಪತ್ರೆ, ಬಳ್ಳಾರಿ
6. ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಮಂಗಳೂರು
7. ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ
8. ಜಿಲ್ಲಾ ಆಸ್ಪತ್ರೆ, ಬೆಳಗಾವಿ
9. ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ
10. ಜಿಲ್ಲಾ ಆಸ್ಪತ್ರೆ, ವಿಜಾಪುರ

## ಮಹಿಳಾ ಆರೋಗ್ಯ ಸಂದರ್ಶಕಿಯರ (ಹಿರಿಯ ಮಹಿಳಾ ಆರೋಗ್ಯ ಸಹಾಯಕಿಯರು) ತರಬೇತಿ :

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
2. ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಬೆಳಗಾವಿ
3. ಜಿಲ್ಲಾ ಆಸ್ಪತ್ರೆ, ಗುಲ್ಬರ್ಗ

## ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯದ (ಪಿ.ಅಂಡ್ ಎಸ್.ಎಂ ಇಲಾಖೆಗೆ ಒಳಪಟ್ಟ) ಗ್ರಾಮಾಂತರ ಆರೋಗ್ಯ ತರಬೇತಿ ಕೇಂದ್ರಗಳು ಹಾಗೂ ಉಪ ಕೇಂದ್ರಗಳ ವಿವರ :

| 1. | ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ | ಗ್ರಾಮಾಂತರ ಆರೋಗ್ಯ ತರಬೇತಿ ಕೇಂದ್ರ | | ಉಪ ಕೇಂದ್ರಗಳು |
|---|---|---|---|---|
| 1. | ಬೆಂಗಳೂರು | ನೆಲಮಂಗಲ | 1. | ತ್ಯಾಮಗೊಂಡ್ಲು |
| | | | 2. | ಶಿವಗಂಗೆ |
| | | | 3. | ಸೊಂಡೇಕೊಪ್ಪ |
| 2. | ಮೈಸೂರು | ನಂಜನಗೂಡು | 4. | ಸುತ್ತೂರು |
| | | | 5. | ಹುರ |
| | | | 6. | ಹುಲ್ಲಹಳ್ಳಿ |
| 3. | ಹುಬ್ಬಳ್ಳಿ | ಕಲಘಟಗೀ | 7. | ಡುಂಡಸೀ |
| | | | 8. | ತಡಸ |
| | | | 9. | ತಡಕನಹಳ್ಳಿ |
| 4. | ಬಳ್ಳಾರಿ | ಕುರುಗೋಡು | 10. | ತೆಕ್ಕಲಕೋಟೆ |
| | | | 11. | ಸಿರಿಗೆರೆ |
| | | | 12. | ರವಿಹಾಳ |

## (ಕ್ಯಾನ್ಸರ್) ಅರ್ಬುದ ರೋಗ ಹತೋಟಿ ಕಾರ್ಯಕ್ರಮ :

ರಾಷ್ಟ್ರೀಯ ಅರ್ಬುದ ರೋಗ ಹತೋಟಿ ಚಿಕಿತ್ಸಾ ಕಾರ್ಯಕ್ರಮದಡಿಯಲ್ಲಿ ಭಾರತ ಸರ್ಕಾರವು ರಾಜ್ಯದ ವೈದ್ಯಕೀಯ ಕಾಲೇಜುಗಳಲ್ಲಿ ಅರ್ಬುದ ರೋಗ ಚಿಕಿತ್ಸಾ ವಿಭಾಗಗಳನ್ನು ಹಾಗೂ ಜಿಲ್ಲಾ ಆಸ್ಪತ್ರೆಗಳಲ್ಲಿ ಹೊರಮೈ ಅರ್ಬುದ ರೋಗಚಿಕಿತ್ಸಾ ಕೇಂದ್ರಗಳನ್ನು ಸ್ಥಾಪಿಸಲು ಕಾರ್ಯಕ್ರಮವನ್ನು ರೂಪಿಸಲಾಗಿದೆ. ಗುಲ್ಬರ್ಗ, ಮಂಡ್ಯ, ಧಾರವಾಡ ಮತ್ತು

ಚಿಕ್ಕಮಗಳೂರು ಇಲ್ಲಿ ಈ ಕಾರ್ಯಕ್ರಮವು ಪ್ರಗತಿಯಲ್ಲಿದೆ. ಕೇಂದ್ರ ಪುರಸ್ಕೃತ ಯೋಜನೆಯ ಅಡಿಯಲ್ಲಿ 50.00 ಲಕ್ಷ ರೂ.ಗಳನ್ನು ರಾಜ್ಯ ಸರ್ಕಾರದ ಯೋಜನೆಯ ಅಡಿಯಲ್ಲಿ 30.00 ಲಕ್ಷ ರೂ.ಗಳನ್ನು 1994-95ರಲ್ಲಿ ಒದಗಿಸಲಾಗಿದೆ.

**ಮಾನಸಿಕ ಕೇಂದ್ರಗಳ ಸ್ಥಾಪನೆ :**

ಬೆಂಗಳೂರಿನ 1. ವಿಕ್ಟೋರಿಯಾ ಆಸ್ಪತ್ರೆ. 2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ. 3. ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ. 4. ಹುಬ್ಬಳ್ಳಿಯ ಕೆ.ಎಂ.ಸಿ. ಆಸ್ಪತ್ರೆ. 5. ಮಂಗಳೂರಿನ ಸರ್ಕಾರೀ ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ. 6. ಬಳ್ಳಾರಿಯ ವೈದ್ಯಕೀಯ ಕಾಲೇಜು ಆಸ್ಪತ್ರೆ. 7. ಬೆಳಗಾವಿಯ ಜಿಲ್ಲಾ ಆಸ್ಪತ್ರೆ. 8. ಗುಲ್ಬರ್ಗದ ಜಿಲ್ಲಾ ಆಸ್ಪತ್ರೆ. 9. ದಾವಣಗೆರೆಯ ಸಿ. ಜಿ. ಆಸ್ಪತ್ರೆ. 10. ಮಾನಸಿಕ ಆಸ್ಪತ್ರೆ ಚಿಕಿತ್ಸಾ ಕೇಂದ್ರಗಳನ್ನು ತೆರೆಯಲಾಗಿದೆ.

**ದಂತ ಚಿಕಿತ್ಸಾಲಯಗಳ ಸ್ಥಾಪನೆ :**

ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಬೋಧಕ ಆಸ್ಪತ್ರೆಗಳಲ್ಲಿ ಒಟ್ಟು 15 (ಹದಿನೈದು) ದಂತ ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ.

**ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮ :**

ಈ ಕೆಳಗೆ ಸೂಚಿಸಲಾದ 14 ನಗರ ಕುಷ್ಠರೋಗ ಹತೋಟಿ ಕೇಂದ್ರಗಳು. ಬೋಧಕ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. 3 ವಿಕಲತೆ ಪುನರ್ ನಿರ್ಮಾಣ ಶಸ್ತ್ರ ಚಿಕಿತ್ಸಾ ಘಟಕಗಳು 6 ಇಪ್ಪತ್ತು ಹಾಸಿಗೆಗಳ ತಾತ್ಕಾಲಿಕ ಕುಷ್ಠರೋಗ ವಾರ್ಡ್‌ಗಳು. ಬಹುವಿಧ ಔಷಧಿ ಚಿಕಿತ್ಸಾ ಕಾರ್ಯಕ್ರಮವನ್ನು ಎಲ್ಲಾ ಸೋಂಕುಭರಿತ ಜಿಲ್ಲೆಗಳಲ್ಲಿ ನಿಯೋಜಿಸಲಾಗಿದೆ.

ಕುಷ್ಠರೋಗ ಪತ್ತೆ ಹಚ್ಚುವಿಕೆ ಹಾಗೂ ಚಿಕಿತ್ಸಾ ವಿವರಣೆ :

| ವರ್ಷ | ಗುರಿ | ಸಾಧನೆ |
|---|---|---|
| 1991-92 | 46.000 | 43.443 |
| 1992-93 | 40.000 | 39.529 |
| 1993-94 | 38.000 | 30.462 |
| 1994-95 | 18.000 | 24.019 |

**ನಗರ ಕುಷ್ಠರೋಗ ಹತೋಟಿ ಕಾರ್ಯಕ್ರಮವನ್ನು ಈ ಕೆಳಕಂಡ ಬೋಧಕ ಆಸ್ಪತ್ರೆಗಳ ಚರ್ಮ ಹಾಗೂ ಗುಹ್ಯರೋಗ ಚಿಕಿತ್ಸಾ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿವೆ (14) :**

1. ವಿಕ್ಟೋರಿಯಾ ಆಸ್ಪತ್ರೆ. ಬೆಂಗಳೂರು 2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ. ಬೆಂಗಳೂರು 3. ಕೃಷ್ಣ ರಾಜೇಂದ್ರ ಆಸ್ಪತ್ರೆ. ಮೈಸೂರು 4. ಗ್ರಾಮಾಂತರ ಆರೋಗ್ಯ ತರಬೇತಿ ಕೇಂದ್ರ. ನಂಜನಗೂಡು. 5. ಕೆ. ಎಂ. ಸಿ. ಆಸ್ಪತ್ರೆ. ಹುಬ್ಬಳ್ಳಿ 6. ಮತ್ತು 7 ವೈದ್ಯಕೀಯ

ಕಾಲೇಜು ಆಸ್ಪತ್ರೆ. ಬಳ್ಳಾರಿ. 8 ಮತ್ತು 9 ಜಿಲ್ಲಾ ಆಸ್ಪತ್ರೆ. ಬೆಳಗಾವಿ 10. ಸರ್ಕಾರೀ ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ. ಮಂಗಳೂರು . 11. ಚಿಗಟೇರಿ ಸಾರ್ವಜನಿಕ ಆಸ್ಪತ್ರೆ. ದಾವಣಗೆರೆ. 12 ಮತ್ತು 13 ಹಾಗೂ 14 ಜಿಲ್ಲಾ ಆಸ್ಪತ್ರೆ, ಗುಲ್ಬರ್ಗ

**ಅಂಗವಿಕಲತೆ ಪುನರ್ ನಿರ್ಮಾಣ ಶಸ್ತ್ರಚಿಕಿತ್ಸಾ ಘಟಕಗಳು -3**

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
2. ಕೃಷ್ಣ ರಾಜೇಂದ್ರ ಆಸ್ಪತ್ರೆ, ಮೈಸೂರು
3. ಸರ್ಕಾರೀ ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ. ಮಂಗಳೂರು

**ತಾತ್ಕಾಲಿಕ 20 ಕುಷ್ಠರೋಗ ಹಾಸಿಗೆಗಳ ಸೌಲಭ್ಯದ ವಾರ್ಡುಗಳು -6**

1. ಕೃಷ್ಣ ರಾಜೇಂದ್ರ ಆಸ್ಪತ್ರೆ. ಮೈಸೂರು
2. ಕೆ. ಎಂ. ಸಿ. ಆಸ್ಪತ್ರೆ. ಹುಬ್ಬಳ್ಳಿ
3. ವೈದ್ಯಕೀಯ ಕಾಲೇಜು ಆಸ್ಪತ್ರೆ. ಬಳ್ಳಾರಿ.
4. 10. ಸರ್ಕಾರೀ ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ. ಮಂಗಳೂರು
5. ಜಿಲ್ಲಾ ಆಸ್ಪತ್ರೆ. ಬೆಳಗಾವಿ
6. ಜಿಲ್ಲಾ ಆಸ್ಪತ್ರೆ. ಗುಲ್ಬರ್ಗಾ

**ರಾಷ್ಟ್ರೀಯ ಅಂಧತ್ವ ನಿವಾರಣಾ ಕಾರ್ಯಕ್ರಮಗಳು :**

2000 ಇಸವಿ ವೇಳೆಗೆ ಕರ್ನಾಟಕ ರಾಜ್ಯದಲ್ಲಿ ಈಗಿನ ಶೇ. 1.4 ರಷ್ಟು ಇರುವ ಅಂಧತ್ವವನ್ನು ಶೇ. 0.3 ಕ್ಕೆ ಇಳಿಸಲು ಈ ಕಾರ್ಯಕ್ರಮದ ಉದ್ದೇಶವಾಗಿದೆ.

1. ಈ ಕಾರ್ಯಕ್ರಮವನ್ನು ಯೋಜಿಸಲು ಮತ್ತು ಕಾರ್ಯಕ್ರಮದ ಮೌಲ್ಯಮಾಪನ ನಡೆಸಲು ರಾಜ್ಯಮಟ್ಟದಲ್ಲಿ ಒಂದು ನೇತ್ರ ಚಿಕಿತ್ಸಾ ಘಟಕವನ್ನು ಸೃಜಿಸಲಾಗಿದೆ.
2. ಆಧುನಿಕ ತಂತ್ರಜ್ಞಾನದ ನೇತ್ರ ಚಿಕಿತ್ಸೆಯನ್ನು ಜನ ಸಮುದಾಯಕ್ಕೆ ಒದಗಿಸಲು ಬೆಂಗಳೂರಿನಲ್ಲಿರುವ ಮಿಂಟೋ ಕಣ್ಣಾಸ್ಪತ್ರೆಯನ್ನು ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆ ಎಂಬುದಾಗಿ ಮೇಲ್ದರ್ಜೆಗೇರಿಸಲಾಗಿದೆ. ಈ ಸಂಸ್ಥೆಯು ಆಧುನಿಕ ಉಪಕರಣಗಳನ್ನು ಮತ್ತು ನುರಿತ ನೇತ್ರ ಶಸ್ತ್ರ ಚಿಕಿತ್ಸಕರನ್ನು ಹೊಂದಿರುತ್ತದೆ.
3. ಜನ ಸಮುದಾಯಕ್ಕೆ ಉನ್ನತ ಮಟ್ಟದ ನೇತ್ರ ಚಿಕಿತ್ಸೆ ನೀಡಲು ಹುಬ್ಬಳ್ಳಿ. ಬೆಳಗಾವಿ. ದಾವಣಗೆರೆ ವೈದ್ಯಕೀಯ ಮಹಾವಿದ್ಯಾಲಯಗಳ ನೇತ್ರ ಚಿಕಿತ್ಸಾ ವಿಭಾಗವನ್ನು ಹೆಚ್ಚುವರಿ ಸಿಬ್ಬಂದಿ ಮಂಜೂರಾತಿಯೊಂದಿಗೆ ಮೇಲ್ದರ್ಜೆಗೇರಿಸಲಾಗಿದೆ.
4. ಪ್ರತಿ ಜಿಲ್ಲಾ ಕೇಂದ್ರದ ಆಸ್ಪತ್ರೆಗಳಲ್ಲಿ ಉನ್ನತ ಮಟ್ಟದ ನೇತ್ರ ಚಿಕಿತ್ಸೆ ನೀಡಲು ಹೆಚ್ಚುವರಿ ನುರಿತ ನೇತ್ರ ಚಿಕಿತ್ಸಕರು ಮತ್ತು ನೇತ್ರ ಸಹಾಯಕರ ಹುದ್ದೆಗಳನ್ನು ಮಂಜೂರು ಮಾಡಿ ಆಧುನಿಕ ಉಪಕರಣವನ್ನು ಒದಗಿಸಲಾಗಿದೆ.
5. ಗ್ರಾಮೀಣ ಜನತೆಗೆ ನೇತ್ರ ಚಿಕಿತ್ಸೆಯ ಸೇವೆಯನ್ನು ಒದಗಿಸುವ ಸಲುವಾಗಿ 7 ಜಿಲ್ಲಾ

ಸಂಚಾರೀ ನೇತ್ರಚಿಕಿತ್ಸಾ ಘಟಕಗಳು ವೈದ್ಯಕೀಯ ಶಿಕ್ಷಣ ನಿರ್ದೇಶಕರ ನಿಯಂತ್ರಣದಲ್ಲಿ ಅಂಧತ್ವ ನಿರ್ಮೂಲನಾ ಕಾರ್ಯಕ್ರಮವನ್ನು ನಿರ್ವಹಿಸಲು ನಿಯಮಿತವಾಗಿ ನೇತ್ರ ಚಿಕಿತ್ಸ ಶಿಬಿರಗಳನ್ನು ಏರ್ಪಡಿಸುತ್ತಿವೆ.

6. ಮಿಂಟೋ ಕಣ್ಣಾಸ್ಪತ್ರೆ. ಬೆಂಗಳೂರು. ಕೃಷ್ಣರಾಜೇಂದ್ರ ಆಸ್ಪತ್ರೆ. ಮೈಸೂರು. ಜಿಲ್ಲಾ ಆಸ್ಪತ್ರೆ. ಬೆಳಗಾವಿಯಲ್ಲಿ ಮೂರು ನೇತ್ರ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿವೆ. ಈ ನೇತ್ರ ಬ್ಯಾಂಕುಗಳು ಕಣ್ಣುಗಳನ್ನು ಶೇಖರಿಸಿ ಅವಶ್ಯಕತೆ ಇರುವವರಿಗೆ ದೃಷ್ಟಿಯನ್ನು ಒದಗಿಸಲು. ಕಣ್ಣು ಬದಲಾವಣೆಗಳನ್ನು ಮಾಡುತ್ತಿರುತ್ತವೆ.

| ವರ್ಷ | ಗುರಿ | ಸಾಧನೆ | ಶೇಕಡವಾರು |
|---|---|---|---|
| 1991-92 | 90.000 | 65.078 | 72.3 |
| 1992-93 | 90.000 | 77.740 | 86.4 |
| 1993-94 | 1.40.000 | 93.359 | 66.7 |
| 1994-95 | 1.40.000 | 1.48.274 | 105.9 |

**ರೀ-ಓರಿಯಂಟೇಷನ್ ಆಫ್ ವೈದ್ಯಕೀಯ ಶಿಕ್ಷಣ-ರೋಂ ಕಾರ್ಯಕ್ರಮ :**

ಗ್ರಾಮಾಂತರ ಜನತೆಯ ಆರೋಗ್ಯ ಸೇವೆಗಳ ಚಿಕಿತ್ಸಾ ಸೌಲಭ್ಯಗಳಿಗಾಗಿ ರಾಜ್ಯದಲ್ಲಿರುವ ವೈದ್ಯಕೀಯ ಕಾಲೇಜುಗಳ ನುರಿತ ವೈದ್ಯರುಗಳಿಂದ ವೈದ್ಯಕೀಯ ತಪಾಸಣೆ ನಡೆಸಲು ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಗುರುತಿಸಿ ವಿವಿಧೋದ್ದೇಶಗಳ ಆರೋಗ್ಯ ಕಾರ್ಯಕರ್ತರು (ಮಹಿಳೆಯರು ಮತ್ತು ಪುರುಷರು) ಸಾಂಕ್ರಾಮಿಕ ರೋಗಗಳ ಹತೋಟಿಗಾಗಿ ಅವರಿಗೆ ತರಬೇತಿಯ ಗ್ರಾಮೀಣ ಆರೋಗ್ಯ ಸೇವೆಗಳ ಹಾಗೂ ಕನಿಷ್ಠ ಅವಶ್ಯಕತೆ ಕಾರ್ಯಕ್ರಮದಡಿಯಲ್ಲಿ ಯೋಜನೆಯನ್ನು ರೂಪಿಸಲಾಗಿದೆ.

ರೋಂ ಕಾರ್ಯಕ್ರಮದಡಿ 9 ವೈದ್ಯಕೀಯ ಕಾಲೇಜುಗಳಲ್ಲಿ ಬ್ರಿಟಿಶ್ ಸರ್ಕಾರದ ನೆರವಿನೊಡನೆ 9 ಸಂಚಾರೀ ಆಸ್ಪತ್ರೆಗಳನ್ನೂ. ಇದಕ್ಕೆ ಹೊಂದಿಕೊಂಡಂತೆ 27 ಸಂಚಾರೀ ಚಿಕಿತ್ಸಾಲಯಗಳನ್ನು ಈ ಕೆಳಗೆ ನಮೂದಿಸಿದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಸ್ಥಾಪಿಸಲಾಗಿದೆ. ಇದಕ್ಕೆ ಬೇಕಾದ ಗ್ಯಾರೇಜುಗಳು. ಡಾರ್ಮಿಟರಿ ವಸತಿ ಗೃಹಗಳೂ. ಸಭಾಂಗಣಗಳೂ. ಉಪನ್ಯಾಸ ಹಾಗೂ ವೈದ್ಯಕೀಯ ಸಲಹೆ-ಸಮಾಲೋಚನೆ ಕೊಠಡಿಗಳ ನಿರ್ಮಾಣ. ಶಸ್ತ್ರ ಚಿಕಿತ್ಸಾ ಕೊಠಡಿಗಳನ್ನು ಸೂಕ್ತ ವಿಸ್ತರಣೆ. ಮಾರ್ಪಾಟುಗಳೊಂದಿಗೆ ಹಾಗೂ ಅಗತ್ಯವಾದ ಪೀಠೋಪಕರಣಗಳೂ. ಸಾಧನ-ಸಾಮಗ್ರಿ ಸಲಕರಣೆಗಳೂ. ವಾಚನಾಲಯ-ಲೈಬ್ರರಿ. ನಿಯತಕಾಲಿಕ ಪ್ರಕಟಣೆಗಳನ್ನೂ ಒದಗಿಸಲಾಗಿದೆ.

ರೋಂ ಕಾರ್ಯಕ್ರಮವು ಗ್ರಾಮಾಂತರ ಪ್ರದೇಶದ ಜನರ ಆರೋಗ್ಯವನ್ನು ಅವರ ನಿವಾಸ ಸ್ಥಾನದಲ್ಲಿಯೇ ಒದಗಿಸುವ ಯೋಜನೆಯಾಗಿದೆ.

ಸಾಧನೆಯ ವಿವರಗಳು :

| ವರ್ಷ | ಒಟ್ಟು ಫಲಾನುಭವಿಗು |
|---|---|
| 1992-93 | 78.568 |
| 1993-94 | 88.679 |
| 1994-95 | 87.437 |

**ರೀ - ಓರಿಯಂಟೇಷನ್ ಆಫ್ ಮೆಡಿಕಲ್ ಎಜ್ಯುಕೇಷನ್ (ರೋಂ ಕಾರ್ಯಕ್ರಮ)**

ವೈದ್ಯಕೀಯ ಕಾಲೇಜುಗಳು

1. ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯ ಬೆಂಗಳೂರು
2. " ಮೈಸೂರು
3. " ಬಳ್ಳಾರ
4. ಕರ್ನಾಟಕ ವೈದ್ಯಕೀಯ ಕಾಲೇಜು. ಹುಬ್ಬಳ್ಳಿ
5. ಸೆಂಟ್ ಜಾನ್ಸ್ ಮೆಡಿಕಲ್ ಕಾಲೇಜು ಬೆಂಗಳೂರು
6. ಕಸ್ತೂರಾ ಬಾ ಮೆಡಿಕಲ್ ಕಾಲೇಜು /ಮಣಿಪಾಲ/ ಮಂಗಳೂರು
7. ಜವಹರಲಾಲ್ ನೆಹರೂ ಮೆಡಿಕಲ್ ಕಾಲೇಜು ಬೆಳಗಾವಿ
8. ಜೆ. ಜೆ.ಎಂ. ವೈದ್ಯಕೀಯ ಕಾಲೇಜು. ದಾವಣಗೆರೆ
9. ಎಂ. ಆರ್. ವೈದ್ಯಕೀಯ ಕಾಲೇಜು. ಗುಲ್ಬರ್ಗ

ಪ್ರಾಥಮಿಕ ಆರೋಗ್ಯ ಕೇಂದ್ರಗಳು

1. ಹೆಸರುಘಟ್ಟ 2. ಕಾಡುಗೊಂಡನಹಳ್ಳಿ
3. ನೆಲಮಂಗಲ
4. ಸಿದ್ದರಾಮನಹುಂಡಿ5. ಗರ್ಗೇಶ್ವರೀ
6. ಹೊಸಕೋಟೆ(ಸಂಜನಗೂಡು ತಾಲ್ಲೂಕು)
7. ಕುರುಗೋಡು 8. ಸಿಡಿಗಿನಮೊಳ
9. ಮರಿಯಮ್ಮನಹಳ್ಳಿ
10.ಕಲಘಟಗೀ 11. ಕುಂಡಗೋಳ
12.ಅಳ್ನಾವರ
13.ಆನೇಕಲ್ 14. ಬಿಡದಿ
15.ದೊಮ್ಮಸಂದ್ರ
16.ಉಳ್ಳಾಲ 17. ಹಿರಿಯಡ್ಕ
18.ಮೂಡಬಿದರೆ
19.ಹಿರೇ ಬಾಗೇವಾಡಿ 20. ನಂದಗಡ
21.ಉಚ್ಚಗಾವೆ
22.ಅಣಜಿ 23. ಕ. ಹರಿಹರ
24.ಕೊಡಗನೂರು
25.ನರೋಣ 26. ಕಮಲಾಪುರ
27.ಕಬ್ಬೂರು

**ಬೋಧಕ ಆಸ್ಪತ್ರೆಗಳಲ್ಲಿ ಆಸ್ಪತ್ರೆ ಫಾರ್ಮಸಿ ಘಟಕಗಳ ಸ್ಥಾಪನೆ -9 :-**

ಆಸ್ಪತ್ರೆ ಫಾರ್ಮಸಿ ಕಾರ್ಯಕ್ರಮವನ್ನು ರಾಜ್ಯವಲಯದ ಯೋಜನೆಯ ಅಡಿಯಲ್ಲಿ ನಿಯೋಜಿಸಲಾಗಿದೆ.

ಉದ್ದೇಶಗಳು :

1. ರಾಜ್ಯದ ಸರ್ಕಾರೀ ಆಸ್ಪತ್ರೆಗಳಲ್ಲಿ ರೋಗಿಗಳ ಉಪಯೋಗಕ್ಕಾಗಿ ಜೀವ ಉಳಿಸುವ ಔಷಧಿಗಳಾದ ಗ್ಲೂಕೋಸ್. ಗ್ಲೂಕೋಸೆಲೈನ್. ನಾರ್ಮಲಿಸಲೈನ್ ಇತ್ಯಾದಿ. ಅಂತರ್ನಾಳ ದ್ರಾವಣಗಳನ್ನು ತಯಾರಿಸುವುದು.

2. ತಾಂತ್ರಿಕವಾಗಿ ಉತ್ತಮವಾದ ಔಷಧಿ ಸಂಸ್ಕರಣೆ. ಉತ್ತಮ ಗುಣ ಸಂಸ್ಕರಣಾ ಪದ್ಧತಿ ಕೇಂದ್ರೀಯ ಸ್ಟರೈಲ್ ಪೂರೈಕೆ ವಿಭಾಗ ಮತ್ತು ದಾಸ್ತಾನು ಪದ್ಧತಿಗಳನ್ನು ರೂಢಿಸುವುದು. ಈಗ 9 ಆಸ್ಪತ್ರೆ ಫಾರ್ಮಸಿಗಳು ಬೋಧಕ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಆಸ್ಪತ್ರೆ ಫಾರ್ಮಸಿಗಳಲ್ಲಿ ಅಂತರ್ನಾಳ ದ್ರಾವಣದ ಉತ್ಪನ್ನ ವಿವರ :

| | 1993-94 | | 1994-95 | |
|---|---|---|---|---|
| 1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು | 1,10.941 | ಬಾಟಲ್ಸ್ | 1,40,013 | ಬಾಟಲ್ಸ್ |
| 2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ | 71.506 | " | 74.325 | " |
| 3. ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು | 82,679 | " | 1.16.200 | " |
| 4. ವೆನ್‌ಲಾಕ್ ಆಸ್ಪತ್ರೆ, ಮಂಗಳೂರು | 54,545 | " | 71.706 | " |
| 5. ಸಿ. ಜಿ. ಆಸ್ಪತ್ರೆ, ದಾವಣಗೆರೆ | 74,521 | | 90,725 | " |
| 6. ವೈದ್ಯಕೀಯ ಕಾಲೇಜ್ ಆಸ್ಪತ್ರೆ, ಬಳ್ಳಾರಿ | 5.536 | " | 43,259 | " |
| 7. ಕೆ. ಎಂ. ಸಿ ಆಸ್ಪತ್ರೆ, ಹುಬ್ಬಳ್ಳಿ | 64,520 | " | 86,815 | " |
| 8. ಜಿಲ್ಲಾ ಆಸ್ಪತ್ರೆ, ಬೆಳಗಾವಿ | 43,981 | " | 38,834 | " |
| 9. ಜಿಲ್ಲಾ ಆಸ್ಪತ್ರೆ. ಗುಲ್ಬರ್ಗಾ | 25,694 | " | 32.508 | " |
| ಒಟ್ಟು | 5,36.762 | ಬಾಟಲ್ಸ್ | 6,92.565 | ಬಾಟಲ್ಸ್ |

1994-95ನೇ ಸಾಲಿನ ವಾರ್ಷಿಕ ಯೋಜನೆಯ ಅಡಿಯಲ್ಲಿ ವೈದ್ಯಕೀಯ ಶಿಕ್ಷಣ ವಿಭಾಗಕ್ಕೆ 2522.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ಇವರಲ್ಲಿ 1649.00 ಲಕ್ಷ ರೂ.ಗಳನ್ನು ರೆವಿನ್ಯೂ ವೆಚ್ಚ ಹಾಗೂ 873.00 ಲಕ್ಷ ರೂ.ಗಳನ್ನು ಬಂಡವಾಳ ವೆಚ್ಚ-ಕಟ್ಟಡಗಳ ನಿರ್ಮಾಣ ದುರಸ್ತಿಗಳಿಗಾಗಿ ಒದಗಿಸಲಾಗಿದೆ. ಇದರಲ್ಲಿ 103.00 ಲಕ್ಷ ರೂ.ಗಳು ಕೇಂದ್ರದ ಪಾಲು - ಕೇಂದ್ರ ಪುರಸ್ಕೃತ ಯೋಜನೆ.

**1994-95ರ ವಾರ್ಷಿಕ ಯೋಜನೆಯಡಿಯ ಸಾಧನೆಗಳು :**

1. ಕರ್ನಾಟಕ ವೈದ್ಯಕೀಯ ಕಾಲೇಜು ಆಸ್ಪತ್ರೆ. ಹುಬ್ಬಳ್ಳಿ ಹಾಗೂ ಸರ್ಕಾರೀ ವೈದ್ಯಕೀಯ ಕಾಲೇಜು ಬಳ್ಳಾರಿ ಇವನ್ನು ಸ್ವಾಯತ್ತ ಸಂಸ್ಥೆಗಳನ್ನಾಗಿ ಪರಿವರ್ತಿಸಿ ಸರ್ಕಾರೀ ಆದೇಶವನ್ನು ನೀಡಲಾಯಿತು.

2. 368.00 ಲಕ್ಷ ರೂಪಾಯಿ ಬೆಲೆಯ ಸಾಧನ ಸಾಮಗ್ರಿಗಳು. ಸಲಕರಣೆಗಳು. ಕ್ಷ -ಕಿರಣ ಯಂತ್ರೋಪಕರಣಗಳು, ಪೀಠೋಪಕರಣಗಳು ಇತ್ಯಾದಿಗಳನ್ನು ಖರೀದಿಸಿ. ಬೋಧಕ ಆಸ್ಪತ್ರೆಗಳು ಹಾಗೂ ವೈದ್ಯಕೀಯ ವಿದ್ಯಾಲಯಗಳಿಗೆ ಪೂರೈಸಲಾಯಿತು.

3. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ. ವಾಣಿವಿಲಾಸ ಆಸ್ಪತ್ರೆ. ಮಿಂಟೊ ಕಣ್ಣಾಸ್ಪತ್ರೆಗೆ ಮೂರು ಲಿಫ್ಟ್ ಅಟೆಂಡರ್ ಹುದ್ದೆಗಳನ್ನು ಸೃಷ್ಟಿಸಿ. ಲಿಫ್ಟ್ ಯಂತ್ರಗಳನ್ನು ನಿರ್ವಹಿಸಲು ಮಂಜೂರು ಮಾಡಲಾಯಿತು.

4. ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಗೆ ಹೆಚ್ಚುವರಿ ಸಿಬ್ಬಂದಿಯಾದ ದಂತ ನೈರ್ಮಲ್ಯಕಾರ, ಡಯಟೀಷಿಯನ್ - ಆಹಾರ ತಜ್ಞ, ಲಿಫ್ಟ್ ಅಟೆಂಡರ್ ಹುದ್ದೆಗಳ ಮಂಜೂರಾತಿ.

5. ಬೆಂಗಳೂರಿನ ವೈದ್ಯಕೀಯ ಮಹಾವಿದ್ಯಾಲಯಕ್ಕೆ ಇ.ಸಿ.ಜಿ. ಅಟೆಂಡರ್ ಹುದ್ದೆಗಳ ಮಂಜೂರಾತಿ.

6. ಮೈಸೂರಿನ ಕೆ. ಆರ್. ಆಸ್ಪತ್ರೆಗೆ ಹೆಚ್ಚುವರಿ 112 ತಂತ್ರಜ್ಞ ಹುದ್ದೆ ಮಂಜೂರಾತಿ.

7. ಮಂಗಳೂರಿನ ಲೇಡಿ ಘೋಷನ್ ಆಸ್ಪತ್ರೆಗೆ ಒಂದು ವಾಹನ ಚಾಲಕ ಹುದ್ದೆಗಳ ಮಂಜೂರಾತಿ.

8. ಬೆಂಗಳೂರಿನ ವಾಣಿವಿಲಾಸ ಆಸ್ಪತ್ರೆ. ಬೌರಿಂಗ್ ಮತ್ತುಲೇಡಿ ಕರ್ಜನ್ ಆಸ್ಪತ್ರೆ. ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ, ಚೆಲುವಾಂಬ ಆಸ್ಪತ್ರೆ. ದಾವಣಗೆರೆಯ ಚಿಗಟೇರಿ ಸಾರ್ವಜನಿಕ ಆಸ್ಪತ್ರೆ ಹಾಗೂ ಜಿಲ್ಲಾ ಆಸ್ಪತ್ರೆ, ಬೆಳಗಾವಿ ಇಲ್ಲಿಗೆ ಆರು ಆಂಬ್ಯುಲೆನ್ಸ್ ವಾಹನಗಳನ್ನು ಖರೀದಿಸಿ ಪೂರೈಸಲಾಯಿತು.

9. ಬೋಧಕ ಆಸ್ಪತ್ರೆಗಳಿಗೆ ಡೀಸಲ್ ಜನರೇಟರ್ ಯಂತ್ರಗಳನ್ನು ಖರೀದಿಸಲಾಯಿತು.

10. ರಕ್ತದ ಬ್ಯಾಂಕುಗಳನ್ನು ನವೀಕರಣಗೊಳಿಸಲಾಯಿತು.

11. ಶಿಕ್ಷಣಾರ್ಥಿಗಳಿಗೆ 100.00 ಲಕ್ಷ ರೂ.ಗಳ ಬೆಲೆಯ ಗ್ರಂಥಾಲಯ ಸಾಮಗ್ರಿಗಳು. ನಿಯತಕಾಲಿಕಗಳು. ಪ್ರಕಟಣೆಗಳು ಇವುಗಳನ್ನು ಖರೀದಿಸಿ ಒದಗಿಸಲಾಯಿತು.

12. ಮೈಸೂರಿನ ಚೆಲುವಾಂಬ ಆಸ್ಪತ್ರೆಯ ಹೊರರೋಗಿಗಳ ವಿಭಾಗದ ನೂತನ ಕಟ್ಟಡ ವನ್ನು ಪೂರ್ತಿಗೊಳಿಸಿ ನಿರ್ಮಿಸಲಾಯಿತು.

13. ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆಯ ಹೊರ ರೋಗಿಗಳ ವಿಭಾಗ ಹಾಗೂ ವಿಶೇಷ ವಾರ್ಡುಗಳ ಕಟ್ಟಡಗಳನ್ನು ಪೂರ್ಣಗೊಳಿಸಲಾಯಿತು.

14. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯ ಬಹು ಮಹಡಿಗಳ ಸಂಕೀರ್ಣ ಕಟ್ಟಡವನ್ನು ಪೂರ್ಣಗೊಳಿಸಲಾಯಿತು.

15. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಧರ್ಮಶಾಲಾ ವಿಭಾಗದ ಕಟ್ಟಡವು ಪ್ರಗತಿಯ ಹಂತದಲ್ಲಿದೆ.

16. ಬೆಂಗಳೂರಿನ ಆರೋಗ್ಯ ವಿಶ್ವವಿದ್ಯಾನಿಲಯಕ್ಕೆ ಒಂದು ಮಾರುತಿ ವಾಹನವನ್ನು ಖರೀದಿಸಿ ಪೂರೈಸಲಾಯಿತು.

17. ಬೆಂಗಳೂರಿನ ವೈದ್ಯಕೀಯ ಮಹಾವಿದ್ಯಾಲಯದ ಗ್ರಂಥಾಲಯ ವಿಭಾಗವನ್ನು ಗಣಕಯಂತ್ರ ಸೇವೆಯೊಡನೆ ಸುಸಜ್ಜಿತಗೊಳಿಸಲಾಯಿತು.

18. ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯಲ್ಲಿ ಕರುಳುಬೇನೆ ಚಿಕಿತ್ಸಾ ಘಟಕವನ್ನು ತೆರೆಯಲಾಗಿದೆ.

19. ಬೆಂಗಳೂರು. ಮೈಸೂರು. ಬಳ್ಳಾರಿ ಮತ್ತು ಹುಬ್ಬಳ್ಳಿಯ ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯಗಳು ಮತ್ತು ಬೆಂಗಳೂರಿನ ದಂತ ಮಹಾವಿದ್ಯಾಲಯದಲ್ಲಿ ಐದು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಸಭೆ. ಸಮ್ಮೇಳನ. ಕಮ್ಮಟ ವಿಚಾರಗೋಷ್ಠಿ ಮತ್ತು ವಸ್ತು ಪ್ರದರ್ಶನಗಳನ್ನು ನಡೆಸಲಾಯಿತು.

20. ಸಮುದಾಯ ಆರೋಗ್ಯ ಸೇವೆಗಳು ಹಾಗೂ ವಾಚನಾಲಯ ಸೌಲಭ್ಯಗಳೊಂದಿಗೆ 4.00 ಲಕ್ಷ ರೂ. ವೆಚ್ಚದಲ್ಲಿ ಒಂದು ಸರ್ವೋಪಯೋಗಿ ವಾಹನವನ್ನು ಖರೀದಿಸಲಾಯಿತು.

21. ರಾಜ್ಯದ ಹತ್ತು ದಾದಿಯರ ಶಾಲೆಗಳನ್ನು ಪೀಠೋಪಕರಣಗಳು ಹಾಗೂ ವಾಚನಾಲಯ ಸೌಲಭ್ಯಗಳೊಂದಿಗೆ ಮೇಲ್ದರ್ಜೆಗೇರಿಸಲಾಯಿತು.

22. ದಾದಿಯರ ಶಾಲೆಗಳ ಪರೀಕ್ಷಾ ಮಂಡಲಿಯನ್ನು ಕೇಂದ್ರೀಕರಿಸಲಾಗುವುದು.

23. ಎಲ್ಲಾ ಬೋಧಕ ಆಸ್ಪತ್ರೆಗಳ ಕೊಳಕು ಮತ್ತು ಗಲೀಜು ಪದಾರ್ಥಗಳನ್ನು ಸುಡಲು ಇನ್ಸಿಲೇಟರ್ ಚಿಮಣಿ ಯಂತ್ರಗಳನ್ನು ಪೂರೈಸಲಾಯಿತು ಮತ್ತು 500 ಹಾಸಿಗೆಗಳಿಗಿಂತ ಕಡಿಮೆಯುಳ್ಳ ಕ್ಷಯ ರೋಗ ಆರೋಗ್ಯಧಾಮಗಳಿಗೆ ಪೈರೋಲೇಟರಸ್ ಯಂತ್ರಗಳನ್ನು ಅನುಕ್ರಮವಾಗಿ ಒದಗಿಸಲಾಯಿತು.

24. ಸರ್ಕಾರೀ ವೈದ್ಯಕೀಯ ಕಾಲೇಜುಗಳಲ್ಲಿ ತಂತ್ರಜ್ಞರ ತರಬೇತಿ ಕಾರ್ಯಕ್ರಮವನ್ನು ಕೈಗೊಳ್ಳಲಾಗುವುದು.

25. ಬೋಧನಾ ವ್ಯವಸ್ಥೆಗೆ ದಾದಿಯರ ಮಹಾವಿದ್ಯಾಲಯವನ್ನು ಮೇಲ್ದರ್ಜೆಗೇರಿಸಿ

ವಿದೇಶದಿಂದ ಮಾದರಿ ಗೊಂಬೆಯನ್ನು ಆಮದು ಮಾಡಿ ಅಂಗರಚನಾ ಕ್ರಮವನ್ನು ಸವಿವರವಾಗಿ ಬೋಧಿಸಲು ಪೂರೈಸಲಾಗಿದೆ.

26. ಬೆಂಗಳೂರಿನ ದಾದಿಯರ ಮಹಾವಿದ್ಯಾಲಯದಲ್ಲಿ ಎಂ.ಎಸ್.ಸಿ(ನರ್ಸಿಂಗ್) ತರಬೇತಿ ನೀಡಲು ಮಂಜೂರಾತಿಯಾಗಿದೆ.

27. 202 ಸ್ನಾತಕೋತ್ತರ ಪದವೀಧರ, ಸ್ನಾತಕೋತ್ತರ ಡಿಪ್ಲೋಮಾ ಸೀಟುಗಳನ್ನು ಹೆಚ್ಚಳ ಮಾಡಲಾಗಿದೆ.

28. 1994-95ರಲ್ಲಿ ಸ್ನಾತಕೋತ್ತರ ತರಗತಿಗಳಿಗೆ ಹಂಚಿಕೆಯನ್ನು ಸ್ಥಳದಲ್ಲೇ ತ್ವರಿತಗತಿಯಲ್ಲಿ ನೀಡಲು ಕ್ರಮ ಕೈಗೊಳ್ಳಲಾಗಿದೆ

## ಸಾರಾಂಶ

### ಸಾಧನ ಸಾಮಗ್ರಿಗಳು ಸಲಕರಣೆಗಳು ಪೀಠೋಪಕರಣಗಳ ಪೂರೈಕೆ

| | | | | |
|---|---|---|---|---|
| 1. | ಬೋಧಕ ಆಸ್ಪತ್ರೆಗಳಿಗೆ ಸರಬರಾಜು ವೆಚ್ಚ | - | 174.24 | ಲಕ್ಷರೂ.ಗಳು |
| 2. | ವೈದ್ಯಕೀಯ ಮಹಾವಿದ್ಯಾಲಯಗಳ ವೆಚ್ಚ | - | 102.85 | ಲಕ್ಷ " |
| 3. | ದಂತ ಮಹಾವಿದ್ಯಾಲಯ ಖರೀದಿ ವೆಚ್ಚ | - | 21.40 | " |
| 4. | ಆಸ್ಪತ್ರೆ ಫಾರ್ಮಸಿ ಘಟಕಗಳಿಗೆ ಪೂರೈಕೆ ವೆಚ್ಚ | - | 14.08 | " |
| 5. | ವಾರ್ಷಿಕ ಯೋಜನೆಯ ಇಡಿಗಂಟು ಖರೀದಿ ವೆಚ್ಚ | - | 167.72 | " |
| | | | ಜುಮ್ಲಾ 480.29 | ಲಕ್ಷ ರೂ.ಗಳು |

**1994-95ನೇ ಸಾಲಿನ ವಾರ್ಷಿಕ ಯೋಜನಾ ಕಾರ್ಯಕ್ರಮಗಳ ಸಂಕ್ಷಿಪ್ತ ವಿವರಣೆ :**

**1. ನಿರ್ದೇಶನ ಮತ್ತು ಆಡಳಿತ - ವೈದ್ಯಕೀಯ ಶಿಕ್ಷಣ :**

ಎಂಟನೇ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯಕ್ಕೆ ಒಂದು ಪ್ರತ್ಯೇಕ ಆಡಳಿತ ಕಛೇರಿಯ ನಿರ್ಮಾಣವನ್ನು 70.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು 1994-95ನೇ ಸಾಲಿನಲ್ಲಿ 8.00 ಲಕ್ಷ ರೂ.ಗಳನ್ನು ಒದಗಿಸಲಾಯಿತು.

**2. ಬೋಧಕ ಆಸ್ಪತ್ರೆಗಳು, ಬೆಂಗಳೂರು :**

ಬೆಂಗಳೂರಿನ ವೈದ್ಯಕೀಯ ಮಹಾವಿದ್ಯಾಲಯಕ್ಕೆ ಚಿಕಿತ್ಸಾ ಸೇವೆಗಳ ಸೌಕರ್ಯಕ್ಕಾಗಿ ವಿಕ್ಟೋರಿಯಾ ಆಸ್ಪತ್ರೆ, ವಾಣೀವಿಲಾಸ ಆಸ್ಪತ್ರೆ, ಮಿಂಟೋ ಕಣ್ಣಾಸ್ಪತ್ರೆ, ಬೆಂಗಳೂರು

ಇವುಗಳನ್ನು ನಿಯೋಜಿಸಲಾಗಿದೆ. ಒಂದು ಆಂಬ್ಯುಲೆನ್ಸ್ ವಾಹನವನ್ನು ಖರೀದಿಸಿ. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಪೂರೈಸಲಾಯಿತು. 1994-95ನೇ ಸಾಲಿನಲ್ಲಿ ಹೆಚ್ಚುವರಿ ಸಿಬ್ಬಂದಿ 3 ಲಿಫ್ಟ್ ಅಟೆಂಡರ್‌ಗಳನ್ನು ಮಂಜೂರು ಮಾಡಲಾಯಿತು.

**3. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು :**

ಈ ಆಸ್ಪತ್ರೆಯು ಬೆಂಗಳೂರಿನ ವೈದ್ಯಕೀಯ ಕಾಲೇಜಿಗೆ ನಿಯೋಜಿಸಲಾಗಿದೆ. ಇಲ್ಲಿ ಆಧುನಿಕ ಚಿಕಿತ್ಸಾವಿಭಾಗವನ್ನು 465.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಈವರೆಗೆ 154.24ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ. 1994-95ನೇ ಸಾಲಿಗೆ 41.93 ಲಕ್ಷ ರೂ. ಗಳನ್ನು ಇದಕ್ಕಾಗಿ ಒದಗಿಸಲಾಗಿದೆ. ದೇಶ -ವಿದೇಶಗಳ ಗಣ್ಯವ್ಯಕ್ತಿಗಳಿಗೆ ವಿಶೇಷ ಚಿಕಿತ್ಸಾ ಸೌಲಭ್ಯಗಳನ್ನು ಈ ಆಸ್ಪತ್ರೆಯಲ್ಲಿ ಒದಗಿಸಲು ಹೆಚ್ಚುವರಿ ವಿಶೇಷ ವಿಭಾಗಗಳನ್ನು ಅತ್ಯಾಧುನಿಕ ಉಪಕರಣಗಳೊಂದಿಗೆ ಸಜ್ಜುಗೊಳಿಸಲಾಗಿದೆ.

**4. ವೈದ್ಯಕೀಯ ಮಹಾವಿದ್ಯಾಲಯದ ಆಸ್ಪತ್ರೆಗಳು, ಮೈಸೂರು :**

ಕೃಷ್ಣರಾಜೇಂದ್ರ ಆಸ್ಪತ್ರೆ ಹಾಗೂ ಚೆಲುವಾಂಬ ಆಸ್ಪತ್ರೆಗಳನ್ನು ಮೈಸೂರಿನ ಸರ್ಕಾರೀ ವೈದ್ಯಕೀಯ ಕಾಲೇಜಿಗೆ ನಿಯೋಜಿಸಲಾಗಿದೆ. ಇಲ್ಲಿನ ಸುಟ್ಟಗಾಯಗಳ ವಾರ್ಡ್. ಕ್ಷ-ಕಿರಣ ವಿಭಾಗ, ಶಸ್ತ್ರ ವಿಭಾಗ ಹೊರರೋಗಿಗಳ ವಿಭಾಗದ ಕಟ್ಟಡಗಳು ಪ್ರಗತಿಯ ಹಂತದಲ್ಲಿದೆ. ಕೃಷ್ಣರಾಜೇಂದ್ರ ಆಸ್ಪತ್ರೆಗೆ ಹೆಚ್ಚುವರಿ ಸಿಬ್ಬಂದಿಯನ್ನು ಹೊರರೋಗಿಗಳ ಸೌಕರ್ಯಕ್ಕಾಗಿ ಮಂಜೂರು ಮಾಡಲಾಗಿದೆ. 300 ಹಾಸಿಗೆಗಳ ಒಳರೋಗಿಗಳ ವಿಭಾಗಕ್ಕೆ 16.00 ಲಕ್ಷ ರೂ.ಗಳ ವೆಚ್ಚದಲ್ಲಿ ಉಪಕರಣಗಳನ್ನು ಖರೀದಿಸಲಾಗಿದೆ.

**5. ಜಿಲ್ಲಾ ಆಸ್ಪತ್ರೆ, ಮಂಗಳೂರು :**

ಸರ್ಕಾರೀ ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ ಮತ್ತು ಲೇಡಿ ಘೋಷನ್ ಆಸ್ಪತ್ರೆಗಳನ್ನು ಮಣಿಪಾಲ, ಮಂಗಳೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. 1994-95ನೇ ಸಾಲಿನಲ್ಲಿ ಒಂದು ವಾಹನ ಚಾಲಕ ಹುದ್ದೆಯನ್ನು ಮಂಜೂರು ಮಾಡಿಸಿ. ಒಂದು ಆಂಬ್ಯುಲೆನ್ಸ್ ವಾಹನವನ್ನು ಖರೀದಿಸಿ ಪೂರೈಸಲಾಗಿದೆ.

**6. ಜಿಲ್ಲಾ ಆಸ್ಪತ್ರೆ, ಬೆಳಗಾವಿ :**

ಬೆಳಗಾವಿ ಜಿಲ್ಲಾ ಆಸ್ಪತ್ರೆಯನ್ನು ಜೆ.ಎನ್. ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. 1994-95ನೇ ಸಾಲಿನಲ್ಲಿ ಯೋಜನೆ ಲೆಕ್ಕಶೀರ್ಷಿಕೆಯಡಿ 1.50ಲಕ್ಷ ರೂ.ಗಳನ್ನು ಹೆಚ್ಚುವರಿ ಸಿಬ್ಬಂದಿಯ ಮಂಜೂರಾತಿಗಾಗಿ ಒದಗಿಸಲಾಗಿದೆ.

**7. ಜಿಲ್ಲಾ ಆಸ್ಪತ್ರೆ ಗುಲ್ಬರ್ಗ :**

ಗುಲ್ಬರ್ಗ ಜಿಲ್ಲಾ ಆಸ್ಪತ್ರೆಯನ್ನು ಎಂ. ಆರ್. ವೈದ್ಯಕೀಯ ಕಾಲೇಜಿಗಾಗಿ ನಿಯೋಜಿಸಲಾಗಿದೆ. 1994-95ನೇ ಸಾಲಿನ ವಾರ್ಷಿಕ ಯೋಜನೆಯ ಅಡಿಯಲ್ಲಿ ಹೆಚ್ಚುವರಿ ಸಿಬ್ಬಂದಿಯ ಮಂಜೂರಾತಿಗಾಗಿ 50 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

**8. ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ :**

ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಕ್ಷಯರೋಗ ಆಸ್ಪತ್ರೆ ಇವುಗಳನ್ನು ಜೆ. ಜೆ. ಎಂ. ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. ಇಲ್ಲಿಗೆ ಒಂದು ವೈದ್ಯಕೀಯ ಚಿಕಿತ್ಸೆಗಾಗಿ ಅಂಬ್ಯುಲೆನ್ಸ್ ವಾಹನವನ್ನು ಪೂರೈಸಲಾಗಿದೆ. 1994-95ರ ಯೋಜನೆಯಡಿಯಲ್ಲಿ ಹೆಚ್ಚುವರಿ ಸಿಬ್ಬಂದಿಯ ಮಂಜೂರಾತಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

**9. ಮಾನಸಿಕ ಆಸ್ಪತ್ರೆ, ಧಾರವಾಡ :**

ಈ ಆಸ್ಪತ್ರೆಯನ್ನು ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. ಎರಡು ಹೆಚ್ಚುವರಿ ಹಾಸಿಗೆಗಳ ವಿಭಾಗವನ್ನು 15.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಹಾಗೂ ನೀರು ಸರಬರಾಜು ವ್ಯವಸ್ಥೆಯ ಸುಧಾರಣೆಗಳಿಗಾಗಿ 1994-95ರಲ್ಲಿ 8.00 ಲಕ್ಷ ರೂ. ಗಳನ್ನು ಯೋಜನೆಯಡಿಯಲ್ಲಿ ಒದಗಿಸಲಾಗಿದೆ.

**10. ಶಾಂತಾಬಾಯಿ ಶಿವರಾಂ ಕ್ಷಯ ಮತ್ತು ಎದೆ ರೋಗಿಗಳ ಆಸ್ಪತ್ರೆ, ಬೆಂಗಳೂರು :**

ಈ ಆಸ್ಪತ್ರೆಯನ್ನು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. ಇಲ್ಲಿಗೆ ಒಂದು ಅಂಬ್ಯುಲೆನ್ಸ್ ವಾಹನವನ್ನು ಒದಗಿಸಲಾಗಿದೆ. ವೈದ್ಯಕೀಯ ದಾಖಲೆಯ ವಿಭಾಗದ ಮಂಜೂರಾತಿಗಾಗಿ 2.50 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

**11. ರಾಜಕುಮಾರಿ ಕೃಷ್ಣರಾಜಮ್ಮಣ್ಣಿ ಕ್ಷಯ ಮತ್ತು ಎದೆ ರೋಗಿಗಳ ಆಸ್ಪತ್ರೆ, ಮೈಸೂರು :**

ಈ ಆಸ್ಪತ್ರೆಯನ್ನು ಮೈಸೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ನಿಯೋಜಿಸಲಾಗಿದೆ. ಇಲ್ಲಿ 8.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಆಧುನಿಕ ಅಡುಗೆ ಕೋಣೆಯನ್ನು ಕೈಗೆತ್ತಿಗೊಳಿಸಲು ಮಂಜೂರಾತಿ ನೀಡಲಾಗಿದೆ. ಒಂದು ಆಂಬುಲೆನ್ಸ್ ವಾಹವನ್ನು ಖರೀದಿಸಿ ಒದಗಿಸಲಾಗಿದೆ.

**12. ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು :**

ಭಾರತೀಯ ವೈದ್ಯಕೀಯ ಮಂಡಲಿ ನಿಯಮಾನುವಳಿಯಾನುಸಾರ 1994-95ನೇ ಸಾಲಿನ ವಾರ್ಷಿಕ ಯೋಜನೆಯಡಿಯಲ್ಲಿ ಹೆಚ್ಚುವರಿ ಬೋಧಕ ಸಿಬ್ಬಂದಿ ಹಾಗೂ ಆಧುನಿಕ ಉಪಕರಣಗಳ ಪೂರೈಕೆಗಾಗಿ 97.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ಇ.ಸಿಜಿ. ತಂತ್ರಜ್ಞ ಹುದ್ದೆಯನ್ನು ಮಂಜೂರು ಮಾಡಲಾಯಿತು. ಸ್ನಾತಕೋತ್ತರ ಮಹಿಳಾ ಅಭ್ಯರ್ಥಿಗಳಿಗೆ 29.00 ಲಕ್ಷರೂ.ಗಳ ಅಂದಾಜು ವೆಚ್ಚದಲ್ಲಿ ವಸತಿ ನಿಲಯವನ್ನು ನಿರ್ಮಿಸಲು ಕ್ರಮಕೈಗೊಳ್ಳಲಾಗಿದೆ. ಅನಾಟಮಿ ವಿಭಾಗ(ಶವಪರೀಕ್ಷಾ ವಿಭಾಗ, ಪ್ರಾಣಿ ಪ್ರಯೋಗಾಲಯ ಹಾಗೂ ಉಪಹಾರ ಮಂದಿರದ ಕಟ್ಟಡಗಳ ನಿರ್ಮಾಣವು ಪ್ರಗತಿಯಲ್ಲಿದೆ. ಮಾನಸಿಕ ಚಿಕಿತ್ಸೆಯಲ್ಲಿ ಸ್ನಾತಕೋತ್ತರ ತರಗತಿಯನ್ನು 1993-94ರಲ್ಲಿ ಪ್ರಾರಂಭಿಸಲಾಯಿತು.

### 13. ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು :

ಜಕ್ಕರಾಯನ ಕೆರೆ ಅಂಗಳದಲ್ಲಿ 120.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಒಂದು ಸುಸಜ್ಜಿತ ಸಭಾಂಗಣವನ್ನು ನಿರ್ಮಿಸಲು ಮಂಜೂರಾತಿ ನೀಡಲಾಗಿದೆ. ಕಾಲೇಜು ಸಿಬ್ಬಂದಿಯ ವಸತಿ ಗೃಹವನ್ನು 50.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ. ಸ್ನಾತಕೋತ್ತರ ಮತ್ತು ಪದವೀಧರ ವಿದ್ಯಾರ್ಥಿಗಳಿಗೆ ವಸತಿನಿಲಯವನ್ನು ನಿರ್ಮಿಸಲು 15.00 ಲಕ್ಷ ರೂ. ಗಳಲ್ಲಿ ಮಂಜೂರು ಮಾಡಲಾಗಿದೆ. ಹೆಚ್ಚುವರಿ ಸಿಬ್ಬಂದಿಯ ಮಂಜೂರಾತಿಗಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

### 14. ದಂತ ಮಹಾವಿದ್ಯಾಲಯ, ಬೆಂಗಳೂರು :

ಹೆಚ್ಚುವರಿ ಪ್ರವೇಶಾವಕಾಶವನ್ನು ಕಲ್ಪಿಸಲು ಕ್ರಮ ಕೈಗೊಳ್ಳಲಾಗಿದೆ. ಯೋಜನೆಯ ಅಡಿಯಲ್ಲಿ ಬೋಧಕ ಸಿಬ್ಬಂದಿ ಹಾಗೂ ಹೆಚ್ಚುವರಿ ಸಿಬ್ಬಂದಿಯ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಸ್ನಾತಕೋತ್ತರ ತರಗತಿಗಳನ್ನು ವಿಶಿಷ್ಟ ವಿಭಾಗಗಳಲ್ಲಿ ತರಬೇತಿ ಪಡೆಯಲು ಕ್ರಮ ಕೈಗೊಳ್ಳಲಾಗಿದೆ. ಈಗಿರುವ ಕಟ್ಟಡದ ಮೇಲೆ ಎರಡನೇ ಮಹಡಿ ಕಟ್ಟಡವನ್ನು 30.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಯೋಜಿಸಲಾಗಿದೆ.

### 15. ದಾದಿಯರ ಶಾಲೆ, ಜಿಲ್ಲಾ ಆಸ್ಪತ್ರೆ, ಬಿಜಾಪುರ :

1994-95ನೇ ಸಾಲಿನಲ್ಲಿ ಯೋಜನೆಯ ಅಡಿಯಲ್ಲಿ ದಾದಿಯರ ಶಾಲೆಯ ಸಿಬ್ಬಂದಿಗೆ ವೇತನ, ಶಿಷ್ಯವೇತನ, ಗೌರವಧನ ಇತರೇ ವೆಚ್ಚಗಳಿಗಾಗಿ 5.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

### 16. ದಾದಿಯರ ಮಹಾವಿದ್ಯಾಲಯ ಬೆಂಗಳೂರು - ಹಾಗೂ ದಾದಿಯರ ಶಾಲೆಗಳು :

ದಾದಿಯರ ಮಹಾವಿದ್ಯಾಲಯಕ್ಕೆ ಯೋಜನೇತರ ವೆಚ್ಚದಲ್ಲಿ 33.99ಲಕ್ಷ ರೂ.ಗಳನ್ನು 1994-95ರಲ್ಲಿ ಒದಗಿಸಲಾಗಿದೆ. ಬೋಧಕ ಆಸ್ಪತ್ರೆಗಳಿಗೆ ಹೊಂದಿಕೊಂಡಿರುವ 9 ದಾದಿಯರ ಶಾಲೆಗಳ ನಿರ್ವಹಣೆಗೆ ಯೋಜನೇತರ ವೆಚ್ಚದಲ್ಲಿ 171.31 ಲಕ್ಷ ರೂ.ಗಳನ್ನು ಒದಗಿಸಲಾಗಿದೆ. ಬೆಂಗಳೂರಿನ ದಾದಿಯರ ಮಹಾವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವೀ ತರಗತಿಯನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಲಾಗಿದೆ.

### 17. ಬಂಡವಾಳ - ವೆಚ್ಚ-1994-95ರಲ್ಲಿ ಪೂರ್ಣಗೊಂಡ ಕಟ್ಟಡಗಳ ವಿವರ :

1. ಮೈಸೂರಿನ ಚೆಲುವಾಂಬ ಆಸ್ಪತ್ರೆಯ ಹೊಸ ಹೊರರೋಗಿಗಳ ವಿಭಾಗದ ಕಟ್ಟಡ.
2. ಬೆಂಗಳೂರಿನ ವಾಣಿವಿಲಾಸ ಆಸ್ಪತ್ರೆಯ ಬಹು ಮಹಡಿ ಕಟ್ಟಡ.
3. ಮೈಸೂರಿನ ಕೃಷ್ಣ ರಾಜೇಂದ್ರ ಆಸ್ಪತ್ರೆಯ ಸುಟ್ಟಗಾಯಗಳ ವಿಭಾಗದ ಕಟ್ಟಡ
4. ಶವಪರೀಕ್ಷಾ ವಿಭಾಗ (ಅನಾಟಮಿ)ದ ಕಟ್ಟಡಗಳು ವೈದ್ಯಕೀಯ ಮಹಾವಿದ್ಯಾಲಯ ಬಳ್ಳಾರಿ

**1994-95ನೇ ಸಾಲಿನ ವಾರ್ಷಿಕ ಯೋಜನೆಯ ಅಡಿಯಲ್ಲಿ ಖರೀದಿಸಿ, ಪೂರೈಸಲಾದ ಸಾಧನ ಸಾಮುಗ್ರಿಗಳು, ಸಲಕರಣೆಗಳು, ಆಂಬ್ಯುಲೆನ್ಸ್ ವಾಹನಗಳು ಇತ್ಯಾದಿಗಳ ವಿವರ :**

1. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ. ಶಾಂತಾಬಾಯಿ ಶಿವರಾಂ ಕ್ಷಯ ಮತ್ತು ಎದೆರೋಗಿಗಳ ಆಸ್ಪತ್ರೆ, ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯದ ಆಸ್ಪತ್ರೆಗಳಿಗೆ ಒಟ್ಟು 4 ಡೀಸಲ್ ಜನರೇಟರ್ (ವಿದ್ಯುದ್ವಾಹಕ) ಯಂತ್ರಗಳನ್ನು ಖರೀದಿಸಿ ಅಳವಡಿಸಲಾಯಿತು.

2. ಶ್ರವಣ ಮತ್ತು ವೀಕ್ಷಣ ಉಪಕರಣಗಳು, ದೂರದರ್ಶನ ಹಾಗೂ ವಿ.ಸಿ.ಆರ್. ಸೆಟ್ಟುಗಳನ್ನು ಖರೀದಿಸಿ ಬೆಂಗಳೂರಿನ ವೈದ್ಯಕೀಯ ಕಾಲೇಜು. ದಂತ ಮಹಾವಿದ್ಯಾಲಯ, ದಾದಿಯರ ಕಾಲೇಜು ದಾದಿಯರ ಶಾಲೆ, ಮೈಸೂರಿನ ವೈದ್ಯಕೀಯ ಮಹಾವಿದ್ಯಾಲಯ, ಚೆಲುವಾಂಬ ಆಸ್ಪತ್ರೆ. ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿಯ ಸರ್ಕಾರಿ ವೆಲ್ಲೆಸ್ಲಿ ಕ್ಷಯ ಮತ್ತು ಎದೆರೋಗಿಗಳ ಆಸ್ಪತ್ರೆ ಇವುಗಳಿಗೆ ಖರೀದಿಸಿ ಪೂರೈಸಲಾಯಿತು.

3. ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ, ದಾವಣಗೆರೆಯ ಚಿಗಟೇರಿಯ ಸಾರ್ವಜನಿಕ ಆಸ್ಪತ್ರೆ, ಜಿಲ್ಲಾ ಆಸ್ಪತ್ರೆ, ಗುಲ್ಬರ್ಗ, ಬಳ್ಳಾರಿಯ ವೈದ್ಯಕೀಯ ಕಾಲೇಜು. ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ ಇವುಗಳಿಗೆ ಏಳು (7) ಕೊಳಕು ಮತ್ತು ಗಲೀಜು ಪದಾರ್ಥಗಳನ್ನು ಸುಡಲು ಇನ್ಸಿಲೇಟರ್ ಚಿಮಣಿ ಯಂತ್ರಗಳನ್ನು ಖರೀದಿಸಿ ಪೂರೈಸಲಾಯಿತು.

4. ಈ ಕೆಳಗೆ ಸೂಚಿಸಲಾದ 9 ಬೋಧಕ ಆಸ್ಪತ್ರೆಗಳಿಗೆ ಆಂಬ್ಯುಲೆನ್ಸ್ ವಾಹನಗಳನ್ನು ಖರೀದಿಸಿ ಪೂರೈಸಲಾಯಿತು.

1. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
2. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ
3. ವಾಣಿವಿಲಾಸ ಆಸ್ಪತ್ರೆ, ಬೆಂಗಳೂರು
4. ಶಾಂತಾಬಾಯಿ ಶಿವರಾಂ ಕ್ಷಯ ಮತ್ತು ಎದೆರೋಗ ಆಸ್ಪತ್ರೆ, ಬೆಂಗಳೂರು
5. ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು
6. ಚೆಲುವಾಂಬ ಆಸ್ಪತ್ರೆ, ಮೈಸೂರು
7. ರಾಜಕುಮಾರಿ ಕೃಷ್ಣರಾಜಮ್ಮಣ್ಣಿ ಕ್ಷಯ ಮತ್ತು ಎದೆರೋಗಿಗಳ ಆಸ್ಪತ್ರೆ. ಮೈಸೂರು
8. ಜಿಲ್ಲಾ ಆಸ್ಪತ್ರೆ, ಬೆಳಗಾವಿ
9. ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ

ನಿರ್ದೇಶಕರ ವೈಯಕ್ತಿಕ ಠೇವಣಿ ಲೆಕ್ಕದಲ್ಲಿ ಜಮೆ ಮಾಡಲಾಗಿದ್ದು ಮೂರುಕೋಟಿ ರೂಪಾಯಿಗಳಲ್ಲಿ 286.65 ಲಕ್ಷ ರೂ.ಗಳ ಬೆಲೆಯ ಸಾಧನ ಸಾಮಗ್ರಿಗಳು. ಸಲಕರಣೆಗಳು ಕ್ಷ-ಕಿರಣ ಯಂತ್ರೋಪಕರಣಗಳನ್ನು ಖರೀದಿಸಿ ಬೋಧಕ ಆಸ್ಪತ್ರೆಗಳು ಹಾಗೂ ವೈದ್ಯಕೀಯ ಮಹಾವಿದ್ಯಾಲಯಗಳಿಗೆ ಪೂರೈಸಲಾಯಿತು.

## ಅನುಬಂಧ -1

ಅ : ಎಂ. ಬಿ. ಬಿ. ಎಸ್ :

ರಾಜ್ಯದ ನಾಲ್ಕು ಸರ್ಕಾರೀ ವೈದ್ಯಕೀಯ ಕಾಲೇಜುಗಳಲ್ಲಿ 625 ಸೀಟುಗಳು ಲಭ್ಯವಿರುತ್ತದೆ. ಮತ್ತುಖಾಸಗೀ ವೈದ್ಯಕೀಯ ಕಾಲೇಜುಗಳಲ್ಲಿ ಲಭ್ಯವಿರುವ ಒಟ್ಟು 2358 ಸೀಟುಗಳು ಲಭ್ಯವಿರುತ್ತವೆ.

ಸರ್ಕಾರದ ಹಾಗೂ ಖಾಸಗೀ ವೈದ್ಯಕೀಯ ಕಾಲೇಜುಗಳ ಸೀಟುಗಳ ವಿವರ :

| ಕ್ರಮ ಸಂಖ್ಯೆ | ಸಂಸ್ಥೆ ಹೆಸರು | 1994-95 | ಸೀಟುಗಳ ಸಂಖ್ಯೆ |
|---|---|---|---|
| ಅ. | ಸರ್ಕಾರೀ ವೈದ್ಯಕೀಯ ಕಾಲೇಜು | | |
| 1. | ವೈದ್ಯಕೀಯ ಕಾಲೇಜು, ಬೆಂಗಳೂರು | | 208 |
| 2. | ವೈದ್ಯಕೀಯ ಕಾಲೇಜು, ಮೈಸೂರು | | 174 |
| 3. | ವೈದ್ಯಕೀಯ ಕಾಲೇಜು, ಬಳ್ಳಾರಿ | | 118 |
| 4. | ಕರ್ನಾಟಕ ವೈದ್ಯಕೀಯ ಕಾಲೇಜು, ಹುಬ್ಬಳ್ಳಿ | | 125 |
| | | ಉಪ ಮೊತ್ತ | 625 |
| ಆ. | ಖಾಸಗೀ ವೈದ್ಯಕೀಯ ಕಾಲೇಜು : | | |
| 1. | ಸೆಂಟ್ ಜಾನ್ ವೈದ್ಯಕೀಯ ಕಾಲೇಜು. ಬೆಂಗಳೂರು | | 60 |
| 2. | ಎಂ. ಎಸ್. ರಾಮಯ್ಯವೈದ್ಯಕೀಯ ಕಾಲೇಜು. ಬೆಂಗಳೂರು | | 150 |
| 3. | ಡಾ ॥ ಅಂಬೇಡ್ಕರ್ ವೈದ್ಯಕೀಯ ಕಾಲೇಜು. ಬೆಂಗಳೂರು | | 120 |
| 4. | ಕೆಂಪೇಗೌಡ ವೈದ್ಯಕೀಯ ಕಾಲೇಜು. ಬೆಂಗಳೂರು | | 120 |
| 5. | ಜೆ. ಜೆ. ಎಂ. ವೈದ್ಯಕೀಯ ಕಾಲೇಜು, ಗುಲ್ಬರ್ಗ | | 328 |
| 6. | ಜೆ. ಎನ್. ವೈದ್ಯಕೀಯ ಕಾಲೇಜು, ಬೆಳಗಾಂ | | 195 |
| 7. | ಎಂ. ಆರ್. ವೈದ್ಯಕೀಯ ಕಾಲೇಜು, ಗುಲ್ಬರ್ಗ | | 185 |

| | | |
|---|---|---|
| 8. | ಆದಿ ಚುಂಚನಗಿರಿ ವೈದ್ಯಕೀಯ ಕಾಲೇಜು. ನಾಗಮಂಗಲ(ಮಂಡ್ಯ) | 195 |
| 9. | ಅಲ್‌ಅಮೀನ್ ವೈದ್ಯಕೀಯ ಕಾಲೇಜು. ಬಿಜಾಪುರ | 130 |
| 10. | ಜೆ. ಎಸ್.ಎಸ್. ವೈದ್ಯಕೀಯ ಕಾಲೇಜು. ಮೈಸೂರು | 200 |
| 11. | ಶ್ರೀ ದೇವರಾಜ್ ಅರಸ್ ದತ್ತಿ ವೈದ್ಯಕೀಯ ಕಾಲೇಜು. ಕೋಲಾರ | 150 |
| 12. | ಬಿ.ಎಲ್.ಡಿ.ಇ.ಎ. ವೈದ್ಯಕೀಯ ಕಾಲೇಜು. ಬಿಜಾಪುರ | 180 |
| 13. | ಸಿದ್ದಾರ್ಥ ವೈದ್ಯಕೀಯ ಕಾಲೇಜು. ತುಮಕೂರು | 195 |
| 14. | ಕಸ್ತೂರ ಬಾ ವೈದ್ಯಕೀಯ ಕಾಲೇಜು. ಮಂಗಳೂರು | 150 |
| | ಉಪ ಮೊತ್ತ | 2358 |
| | (ಅ + ಆ) ಸರ್ಕಾರಿ ಮತ್ತು ವೈದ್ಯಕೀಯ ಕಾಲೇಜುಗಳ ಸೀಟಿನ ಮೊತ್ತ | 2983 |

**ಅ. ಸ್ನಾತಕೋತ್ತರ ಪದವಿ ತರಗತಿ :**

ರಾಜ್ಯದ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಹಾಗೂ ದಂತ ಮಹಾವಿದ್ಯಾಲಯಗಳಲ್ಲಿ ಹಾಗೂ ವಿಶೇಷ ಪರಿಣಿತ ಸೇವೆಗಳಲ್ಲಿ ಒಟ್ಟು 889 ಸೀಟುಗಳ ಸೌಲಭ್ಯವನ್ನು ಪದವೀಧರ, ಸ್ನಾತಕೋತ್ತರ ಹಾಗೂ ಡಿಪ್ಲೋಮಾ ತರಗತಿಗಳಿಗೆ ಪ್ರವೇಶವಕಾಶ ಕಲ್ಪಿಸಲಾಗಿದೆ.

# ಅನುಬಂಧ - 2

## ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕೇಡರ್ ವೈಸ್ ಪ್ರಕಾರ ಇರುವ ಹುದ್ದೆಗಳ ವಿವರ

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1. | ವೈದ್ಯಕೀಯ ಶಿಕ್ಷಣ ನಿರ್ದೇಶಕರು | 1 | ಮುಖ್ಯ ಆಡಳಿತಾಧಿಕಾರಿ |
| 2. | ಸಹ ನಿರ್ದೇಶಕರು, ವೈದ್ಯಕೀಯ ಶಿಕ್ಷಣ | 1 | ಇವರು ಸಹ ನಿರ್ದೇಶಕರ |
| 3. | ಉಪ ನಿರ್ದೇಶಕರು, ವೈದ್ಯಕೀಯ ಶಿಕ್ಷಣ, ಒಂದು ಮತ್ತು ಎರಡು | 2 | ಹುದ್ದೆ ಎದುರುಕಾರ್ಯ ನಿರ್ವಹಿಸುತ್ತಿರುತ್ತಾರೆ. |
| 4. | ಆಡಳಿತಾಧಿಕಾರಿ ವೈದ್ಯಕೀಯ ಶಿಕ್ಷಣ | 1 | |
| 5. | ಮುಖ್ಯ ಲೆಕ್ಕಾಧಿಕಾರಿ ಹಾಗೂ ಆರ್ಥಿಕ ಸಲಹೆಗಾರರು (ವೈಶಿ) | 1 | |
| 6. | ಯೋಜನಾ ಅಧಿಕಾರಿ, (ವೈಶಿ) | 1 | |
| 7. | ಹಿರಿಯ ಸರ್ಜನ್ (ವೈಶಿ) | 1 | |
| 8. | ನಿರ್ದೇಶಕರು, ಮಿಂಟೋ ಕಣ್ಣಾಸ್ಪತ್ರೆ, ಬೆಂಗಳೂರು | 1 | |
| 9. | ಪ್ರಾಂಶುಪಾಲರು, ಸರ್ಕಾರಿ ವೈದ್ಯಕೀಯ ಕಾಲೇಜುಗಳು | 4 | |
| 10. | ಪ್ರಾಂಶುಪಾಲರು, ಸರ್ಕಾರಿ ದಂತ ಕಾಲೇಜು, ಬೆಂಗಳೂರು | 1 | |
| 11. | ಪ್ರಾಂಶುಪಾಲರು, ದಾದಿಯರ ಶಾಲೆಗಳು | 10 | |
| 12. | ಪ್ರಾಂಶುಪಾಲರು, ದಾದಿಯರ ಕಾಲೇಜು, ಬೆಂಗಳೂರು | 1 | |
| 13. | ಬೋಧಕ ಆಸ್ಪತ್ರೆಗಳ ಅಧೀಕ್ಷಕರು | 21 | |
| 14. | ಮಹಿಳಾ ಆರೋಗ್ಯ ಕಾರ್ಯಕರ್ತೆಯರ ತರಬೇತಿ ಶಾಲೆಯ ಅಧೀಕ್ಷಕರು | 4 | |
| 15. | ಪ್ರೊಫೆಸರ್ಸ್ | 217 | |
| 16. | ಸಹಾಯಕ ಪ್ರೊಫೆಸರ್ಸ್ | 237 | |
| 17. | ಉಪನ್ಯಾಸಕರು | 432 | |
| 18. | ದಾದಿಯರ ಬೋಧಕರು | 60 | |
| 19. | ಕ್ಲಿನಿಕಲ್ ಇನ್‌ಸ್ಪೆಕ್ಟರ್ಸ್ | 4 | |
| | ಉಪ ಮೊತ್ತ | 1000 | |

ಕೆಳಕಂಡ ಹುದ್ದೆಗಳು ಎರಡೂ ಇಲಾಖೆಗಳಿಗೆ ಸಾಮಾನ್ಯವಾಗಿ ಅನ್ವಯಿಸುತ್ತವೆ.

| | |
|---|---|
| 20. ಆರೋಗ್ಯ ಉಪಕರಣಗಳ ಅಧಿಕಾರಿ | 1 |
| 21. ಉಪ ನಿರ್ದೇಶಕರು, ಸಾರಿಗೆ | 1 |
| 22. ಉಪ ನಿರ್ದೇಶಕರು, ಔಷಧ | 1 |
| 23. ಉಪ ನಿರ್ದೇಶಕರು, ವೈದ್ಯಕೀಯ | 1 |
| 24. ಸಹ ನಿರ್ದೇಶಕರು, ನೇತ್ರ | 1 |
| 25. ಸಹ ನಿರ್ದೇಶಕರು, ವೈದ್ಯಕೀಯ | 1 |
| 26. ಸಹ ನಿರ್ದೇಶಕರು, ಕ್ಷಯ | |
| 27. ಸಹ ನಿರ್ದೇಶಕರು, ಕುಷ್ಠ ರೋಗ | 1 |
| 28. ಹಿರಿಯ ಸಹಾಯಕ ನಿರ್ದೇಶಕರು, ದಾದಿಯರು | 1 |
| ಉಪ ಮೊತ್ತ | 9 |
| ಒಟ್ಟು ಮೊತ್ತ | 1009 |

## ಸಂಕ್ಷಿಪ್ತ ಮೇಲ್ನೋಟ ವೈದ್ಯಕೀಯ ಶಿಕ್ಷಣದ ವರದಿ

ಈಗಾಗಲೇ ವಿಶ್ವ ಆರೋಗ್ಯ ಸಂಸ್ಥೆಯು ನಿಗಧಿಪಡಿಸಿರುವ ಗುರಿಯ ಮೇರೆಗೆ ಸರ್ವರಿಗೂ ಆರೋಗ್ಯ - 2000ದ ವರ್ಷದಲ್ಲಿ, ಸೇವೆಗಳು ಮುಟ್ಟುವ ನಿಗದಿತ ವರ್ಷವಾಗಿದೆ. ಆದ ಕಾರಣ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯವು ಪ್ರಾಮಾಣಿಕ ಪೂರ್ವಕವಾಗಿ ಸಮಾಜದಲ್ಲಿ ಹೊಸ ಸಾಮಾಜಿಕ ಬದಲಾವಣೆ ಅಥವಾ ಸಾಮಾಜಿಕ ಕ್ರಾಂತಿಯನ್ನು ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳ ಹಳೇ ಪದ್ಧತಿಗಳನ್ನು ಹೋಗಲಾಡಿಸಿ, ನೂತನ ಆರೋಗ್ಯ ನಿಯಮಗಳನ್ನು ಅನುಸರಿಸಲು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಆದರೆ ಸಮಾಜದಲ್ಲಿ ಯಾವುದೇ ಹೊಸ ಪದ್ಧತಿಗಳನ್ನು ಅಥವಾ ಹೊಸ ವಿಧಾನಗಳನ್ನು ಅಳವಡಿಸಿದಾಗ ಸಮಾಜದಲ್ಲಿ ಶೀಘ್ರ ಬದಲಾವಣೆ ಕಂಡು ಬರಲು ಒಮ್ಮೆಗೇ ಕಷ್ಟವಾಗುತ್ತದೆ. ಕಾರಣ ಅವರ (ಜನರ) ಹಳೆಯ ಜ್ಞಾನ. ಮನೋಭಾವನೆ ಮತ್ತು ಅಭ್ಯಾಸಗಳ ಅಂತರದ ಸಮಸ್ಯೆ ಕಾಣಬರುವುದು ಸಹಜ. ಯಾವುದೇ ಹೊಸಪದ್ಧತಿಗಳನ್ನು ಜಾರಿಗೊಳಿಸಿದಾಗ ಅದರ ಕೆಲಸವು ಸುಲಭವಾಗಿ ಪರಿಣಾಮ ಕಾರಿಯಾಗುವುದಿಲ್ಲ. ಇದು ಪರಿಣಾಮಕಾರಿ ಆಗಲು ಹಂತ ಹಂತವಾಗಿ ಬದಲಾವಣೆಯು ಕ್ರಮೇಣ ಅನುಷ್ಠಾನಕ್ಕೆ ಬರುವುದು. ಇದರಲ್ಲಿ ಮುಖ್ಯವಾಗಿ ಮೊದಲನೆಯ ಹಂತ ಜನರಲ್ಲಿ ಅರಿವನ್ನು ಮೂಡಿಸುವುದು. ಶ್ರದ್ಧೆಯನ್ನು ಉಂಟು ಮಾಡುವುದು. ಆಗಿಂದಾಗ್ಗೆ ಇದರ ಆಗು-ಹೋಗುಗಳನ್ನು ಅಳತೆ ಮಾಡಲಾಗುವುದು ಹಾಗೂ ಸಾಧು ಪ್ರಯತ್ನ ಹಾಗೂ ಅಂತಿಮ ಘಟ್ಟದ ಅಳವಡಿಕೆಗಳನ್ನು ಸಮತೋಲನದಿಂದ ಪರೀಕ್ಷಿಸಬೇಕಾಗುತ್ತದೆ.

ಮೇಲಿನ ಎಲ್ಲಾ ಬದಲಾವಣೆಗಳೂ ಆರೋಗ್ಯ ಶಿಕ್ಷಣದ ಪಾತ್ರವು ಅತ್ಯಾವಶ್ಯಕವಾಗಿದೆ. ಇದರಿಂದ ವೈದ್ಯಕೀಯ ಶಿಕ್ಷಣ ಸೇವೆಗಳು ಚಿಕಿತ್ಸಾ ಸೌಲಭ್ಯಗಳನ್ನು ಬದಲಾವಣೆಗೆ ತರಲು ಸಾಧ್ಯವಾಗುತ್ತದೆ. ಆರೋಗ್ಯ ಶಿಕ್ಷಣವು ಎಲ್ಲಾಆರೋಗ್ಯ ಕಾರ್ಯಕ್ರಮಗಳ ಅವಿಭಾಜ್ಯ ಅಂಗ ವಾಗಿದ್ದು. ಅದರಲ್ಲೂ ವಿಶೇಷವಾಗಿ ವ್ಯಾಪಕ ವಿಸ್ತಾರತೆಯನ್ನು ಸಜ್ಜುಗೊಳಿಸಿ ಇದರ ಮುಖಾಂತರ ರೋಗ ನಿರೋಧಕ ಸೇವೆಗಳು. ಗುಣಪಡಿಸುವ ಹಾಗೂ ಔಷಧಿಗಳ ಚಿಕಿತ್ಸೆಗೆ ಒಳಪಡದೆ ಮೇಲ್ದರ್ಜೆಗೇರಿಸುವ. ಮುಂದುವರಿಸುವ ಸೇವಾ ವಿಧಾನ ಹಾಗೂ ಪುನಃರ್ವಸತಿಯನ್ನು ಆಸ್ಪತ್ರೆಗಳು ಹಾಗೂ ಹೊರ ವಲಯಗಳಲ್ಲಿ ಆರೋಗ್ಯ ಶಿಕ್ಷಣದ ಕಾರ್ಯಕ್ರಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವುದು. ಈ ದಿಸೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯು ಪ್ರಾಮಾಣಿಕ ಪ್ರಯತ್ನದಿಂದ ಈ ಕೆಳಕಂಡ ಕ್ಷೇತ್ರಗಳನ್ನು ಬಲಪಡಿಸುವುದು ಮುಖ್ಯ ಗುರಿಯಾಗಿದೆ.

1. ಬೋಧಕ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮ.
2. ಆರೋಗ್ಯ ಶಿಕ್ಷಣ ಮತ್ತು ಸೇವೆ.
3. ಸರಿಯಾದ ರೀತಿಯಲ್ಲಿ ಆರೋಗ್ಯ ಸಮಸ್ಯೆಗಳನ್ನು ಗುರುತಿಸುವುದು ಮತ್ತು ಗುಣ ಪಡಿಸುವುದು.
4. ಸಾಮಾಜಿಕ ಉಪನಿಂದನೆಗಳನ್ನು ನಿವಾರಿಸುವುದು.
5. ಸಾಂಸ್ಕೃತಿಕ. ಸಾಮಾಜಿಕ. ಮಾನಸಿಕ. ಆರ್ಥಿಕ ಅಂಶಗಳನ್ನು ತಿಳಿದು ಮುಂದಿನ ಕ್ರಮ ಕೈಗೊಳ್ಳಲು ಪ್ರೋತ್ಸಾಹಿಸುವುದು.
6. ಕ್ರಮಬದ್ಧವಾದ ರೋಗಲಕ್ಷಣ. ನಿರ್ಣಯಗಳನ್ನು ಗುರುತಿಸುವುದು. ಕ್ಷ- ಕಿರಣ - ಪ್ರಧಾನ ಹಾಗೂ ಸಾಮಾನ್ಯ ಶಸ್ತ್ರ ಚಿಕಿತ್ಸೆ. ಹಾಗೂ ಆಸ್ಪತ್ರೆ ಫಾರ್ಮಸಿಯಲ್ಲಿ ಮುಖ್ಯ ಅಂತರ್ನಾಳ ದ್ರಾವಣಗಳನ್ನು ಉತ್ಪನ್ನ ಮಾಡುವುದು.
7. ಸಭೆ. ಸಮ್ಮೇಳನ. ಚರ್ಚಾಕೂಟ. ವಿಚಾರಗೋಷ್ಠಿ. ವಸ್ತುಪ್ರದರ್ಶನ ಮತ್ತು ಕಮ್ಮಟಗಳನ್ನು ಏರ್ಪಡಿಸುವುದು.
8. ಸ್ನಾತಕೋತ್ತರ ಮತ್ತು ಪದವೀಧರರ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ವೈದ್ಯಕೀಯ ಗ್ರಂಥಗಳು. ನಿಯತಕಾಲಿಕಗಳು ಇತ್ಯಾದಿಗಳನ್ನು ಪೂರೈಸುವುದು.
9. ಸಂಶೋಧನಾ ಚಟುವಟಿಕೆಗಳನ್ನು ವೈದ್ಯಕೀಯ ಕ್ಷೇತ್ರದಲ್ಲಿ ವಿವಿಧ ವಿಷಯಗಳ ಬಗ್ಗೆ ನಿರ್ವಹಿಸುವುದು ಇತ್ಯಾದಿ.
10. ವೈದ್ಯಕೀಯ ದಾಖಲೆ ಮತ್ತು ವರದಿಗಳನ್ನು ಕ್ರಮಬದ್ಧವಾಗಿ ವ್ಯವಸ್ಥೆಗೊಳಿಸುವುದು.
11. ಈಗಾಗಲೇ ದಂತವೈದ್ಯ. ಶುಶ್ರೂಷಾ ಮಹಾವಿದ್ಯಾಲಯಗಳಲ್ಲಿ ಟಾಸ್ಕ್ ಫೋರ್ಸ್ ಕಮಿಟಿಗಳನ್ನು ರಚಿಸಲಾಗಿದೆ. ಹಾಗೂ ಉಳಿದ ಎಲ್ಲಾ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಇದೇ ರೀತಿ ಟಾಸ್ಕ್ ಫೋರ್ಸ್ ಕಮಿಟಿಗಳನ್ನು ರಚಿಸಲು ನಿರ್ಧರಿಸಲಾಗಿದೆ.

12. ಇದರ ಜೊತೆಗೆ ನಾವು ಕಾಲಕಾಲಕ್ಕೆ ವೈದ್ಯಕೀಯ ಶಿಕ್ಷಣ ಸಂಸ್ಥೆಗಳ ಹಾಗೂ ಬೋಧಕ ಆಸ್ಪತ್ರೆಗಳ ಪ್ರಾಂಶುಪಾಲರು ಮತ್ತು ಅಧೀಕ್ಷಕರುಗಳ ಸಭೆಯನ್ನು ಕರೆಯಲು ಸಹ ನಿರ್ಧರಿಸಲಾಗಿದೆ.

13. ಸುಸಜ್ಜಿತ ಸಾಧನ ಸಾಮಗ್ರಿ, ಉಪಕರಣಗಳನ್ನು ವಿದ್ಯುತ್‌ವಾಹಕ ಯಂತ್ರಗಳನ್ನು, ಆಂಬ್ಯುಲೆನ್ಸ್ ವಾಹನಗಳನ್ನು ರಕ್ತನಿಧಿಗಳ ಆಧುನೀಕರಣ ಹಾಗೂ ಕಟ್ಟಡಗಳ ವಿಸ್ತರಣೆ, ಮಾರ್ಪಾಟು ಹಾಗೂ ದುರಸ್ತಿ ಕೆಲಸಗಳನ್ನು ಮಾಡುವುದರಿಂದ ವೈದ್ಯರಿಗೆ ಹಾಗೂ ರೋಗಿಗಳಿಗೆ, ದಾದಿಯರು ಹಾಗೂ ಅರೆ - ವೈದ್ಯಕೀಯ ಸಿಬ್ಬಂದಿಗಳಿಗೆ ಉತ್ತಮವಾದ ವಸತಿ ಸೇವಾ ಸೌಲಭ್ಯಗಳನ್ನು ಒದಗಿಸುವುದು ಈ ಇಲಾಖೆಯ ಮುಖ್ಯ ಉದ್ದೇಶಿತ ಗುರಿಯಾಗಿದೆ.

ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಕುಂಠಿತಗೊಂಡಿರುವುದಕ್ಕೆ ಕಾರಣಗಳು :

ಸುಪ್ರೀಂ ಕೋರ್ಟಿನ ತೀರ್ಪಿನ ಅನ್ವಯ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಮೀಸಲಾತಿ ನಿಯಮಗಳನ್ನು ಅನುಸರಿಸಬೇಕಾದ ಪ್ರಯುಕ್ತ ಇಲಾಖೆಯಲ್ಲಿ ಬಹುತೇಕ ಹುದ್ದೆಗಳನ್ನು ಖಾಲಿ ಇಟ್ಟಿರುವುದರಿಂದ ಯೋಜನಾ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಕುಂಠಿತ ಗೊಂಡಿರುತ್ತದೆ.

**S. KANTHA**
Director of Medical Education
Bangalore

# ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ 1994-95ನೇ ಸಾಲಿನ ವಾರ್ಷಿಕ ವರದಿ :

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯು ಆಯುರ್ವೇದ. ಯುನಾನಿ. ಸಿದ್ಧ. ಪ್ರಕೃತಿ ಚಿಕಿತ್ಸೆ. ಯೋಗ ಮತ್ತು ಹೋಮಿಯೋಪತಿ ಪದ್ಧತಿಗಳ ಮೂಲಕ ಗ್ರಾಮಾಂತರ ಪ್ರದೇಶಗಳ ಹಾಗೂ ನಗರಗಳ ನಾಗರೀಕರಿಗೆ ಆರೋಗ್ಯ ಸೇವೆಯನ್ನು ಒದಗಿಸಲು ಹಾಗೂ ಈ ಪದ್ಧತಿಗಳಲ್ಲಿ ವೈದ್ಯಕೀಯ ಶಿಕ್ಷಣವನ್ನು ನೀಡಲು ಆಯುರ್ವೇದ ಮತ್ತು ಯುನಾನಿ ಔಷಧಗಳ ತಯಾರಿಕೆಯ ಮೇಲೆ ನಿಯಂತ್ರಣ ಹೊಂದಲು ಸ್ಥಾಪಿಸಲ್ಪಟ್ಟಿತು. ಹಾಗೂ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವೈದ್ಯಕೀಯ ವೃತ್ತಿಯನ್ನು ನಡೆಸಲು ಈ ಇಲಾಖೆಯು ಕ್ರಮಬದ್ಧಗೊಳಿಸುತ್ತದೆ.

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ಮುಖ್ಯಸ್ಥರಾದ ನಿರ್ದೇಶಕರಿಗೆ ಈ ಕೆಳಕಂಡ ಅಧಿಕಾರಿಗಳು ನಿರ್ದೇಶನಾಲಯದಲ್ಲಿ ಹಾಗೂ ವಿಭಾಗೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

1. ಉಪ ನಿರ್ದೇಶಕರು (ಆಯುರ್ವೇದ).
2. ಉಪ ನಿರ್ದೇಶಕರು (ಯುನಾನಿ).
3. ಆಡಳಿತಾಧಿಕಾರಿಗಳು.
4. ಲೆಕ್ಕಾಧಿಕಾರಿಗಳು
5. ವೈದ್ಯಾಧಿಕಾರಿ ದರ್ಜೆ -1. (ಪ್ರಕೃತಿ ಚಿಕಿತ್ಸೆ ಮತ್ತು ಯೋಗ)
6. ಉಪ ನಿರ್ದೇಶಕರು (ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವಿಭಾಗೀಯ ಕಛೇರಿ, ಗುಲ್ಬರ್ಗಾ).

1993-94 ಮತ್ತು 1994-95ನೇ ವರ್ಷದಲ್ಲಿ ಈ ಇಲಾಖೆಗೆ ಕೆಳಕಂಡಂತೆ ಆಯವ್ಯಯವನ್ನು ಗೊತ್ತುಪಡಿಸಲಾಗಿದೆ.

(ರೂ - ಲಕ್ಷಗಳಲ್ಲಿ)

| | 1993-94 | | | | 1994-95 | | | |
|---|---|---|---|---|---|---|---|---|
| | ರಾಜ್ಯಮಟ್ಟ | | ಜಿಲ್ಲಾಮಟ್ಟ | | ರಾಜ್ಯ ಮಟ್ಟ | | ಜಿಲ್ಲಾಮಟ್ಟ | |
| | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ |
| ಯೋಜನೇತರ | 748.45 | 653.05 | 520.47 | 520.47 | 781.33 | 730.32 | 556.09 | 556.09 |
| ಯೋಜನೆ | 78.00 | 55.97 | 247.00 | 133.00 | 91.00 | 82.71 | 267.00 | 267.00 |
| ಕೇಂದ್ರ ಪುರಸ್ಕೃತ ಯೋಜನೆ | 6.00 | 3.62 | - | - | 6.00 | 4.69 | - | - |
| ಒಟ್ಟು | 832.45 | 712.64 | 767.47 | 653.47 | 878.33 | 817.72 | 823.09 | 823.09 |

## 1994-95ನೇ ಸಾಲಿನ ಸಾಧನೆಗಳು

1. 24 ಆಯುರ್ವೇದ, 2 ಯುನಾನಿ ಮತ್ತು 1 ಹೋಮಿಯೋಪತಿ ಔಷಧಾಲಯಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ತೆರೆಯಲು ಸರ್ಕಾರವು ಮಂಜೂರಾತಿ ನೀಡಿದೆ.
2. ಹಾಸನದ ಜಿಲ್ಲಾ ಸರ್ಕಾರಿ ಆಯುರ್ವೇದ ಆಸ್ಪತ್ರೆಯಲ್ಲಿ 10 ಹಾಸಿಗೆಗಳ ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ ವಿಭಾಗವನ್ನು ಮತ್ತು ಶಿವಮೊಗ್ಗದ ಜಿಲ್ಲಾ ಸರ್ಕಾರಿ ಆಯುರ್ವೇದ ಆಸ್ಪತ್ರೆಯಲ್ಲಿ 10 ಹಾಸಿಗೆಗಳ ಸರ್ಕಾರಿ ಯುನಾನಿ ವಿಭಾಗಗಳನ್ನು ತೆರೆಯಲು ಸರ್ಕಾರವು ಮಂಜೂರಾತಿ ನೀಡಿದೆ.
3. ಧಾರವಾಡ ಜಿಲ್ಲೆಯ ಶಿಗ್ಗಾಂವ್ ಮತ್ತು ಮೈಸೂರು ಜಿಲ್ಲೆಯ ನಂಜನಗೂಡಿನಲ್ಲಿ ತಲಾ 6 ಹಾಸಿಗೆಗಳ ಸರ್ಕಾರಿ ಆಯುರ್ವೇದ ಆಸ್ಪತ್ರೆ ತೆರೆಯಲು ಸರ್ಕಾರವು ಮಂಜೂರಾತಿ ನೀಡಿದೆ.
4. ಸರ್ಕಾರಿ ಕೇಂದ್ರಿಯ ಔಷಧಾಗಾರಕ್ಕೆ ಹಾಲಿ ಇರುವ ಅಧೀಕ್ಷಕರ ಹುದ್ದೆಯನ್ನು ಮೇಲ್ದರ್ಜೆಗೇರಿಸಿ ಪತ್ರಾಂಕಿತ ಸಹಾಯಕ ಹುದ್ದೆಯನ್ನಾಗಿ ಮಂಜೂರಾತಿ.

thy

5. ಬಿಜಾಪುರದ ಸರ್ಕಾರಿ ಆಯುರ್ವೇದ ಆಸ್ಪತ್ರೆಯಲ್ಲಿರುವ 1 ವಾರ್ಡ್ ಆಯಾ ಹುದ್ದೆಯನ್ನು ಮಹಿಳಾ ಮಸಾಜಿಸ್ಟ್ ಆಗಿ ಮೇಲ್ದರ್ಜೆಗೇರಿಸಿದ ಆದೇಶ.

6. ಬಳ್ಳಾರಿಯ ತಾರಾನಾಥ ಆಯುರ್ವೇದ ಆಸ್ಪತ್ರೆಯಲ್ಲಿ ಹಾಲಿ ಇರುವ ವಾರ್ಡ್ ಅಟೆಂಡರ್ ಮತ್ತು ವಾರ್ಡ್ ಆಯಾಗಳ ತಲಾ 1 ಹುದ್ದೆಯನ್ನು ಪುರುಷ ಮತ್ತು ಮಹಿಳಾ ಮಸಾಜಿಸ್ಟ್ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ.

7. ಬಳ್ಳಾರಿಯ ತಾರಾನಾಥ ಆಯುರ್ವೇದ ಮಹಾವಿದ್ಯಾಲಯಕ್ಕೆ 2 ಪ್ರಾಧ್ಯಾಪಕರ ಹುದ್ದೆಗಳ ಮಂಜೂರಾತಿ.

8. ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯಗಳಿಗೆ ತಲಾ 1 ಮಿನಿ ಬಸ್ ಖರೀದಿ.

9. ನಿರ್ದೇಶನಾಲಯಕ್ಕೆ 1 ಮ್ಯಾನೇಜರ್ ಹುದ್ದೆಯ ಸೃಷ್ಟಿ.

10. ಮೈಸೂರು, ಬಿಜಾಪುರ, ಮತ್ತು ಶಿವಮೊಗ್ಗದ ಸರ್ಕಾರಿ ಆಯುರ್ವೇದ ಆಸ್ಪತ್ರೆಗಳಿಗೆ ತಲಾ 1 ಕಛೇರಿ ಅಧೀಕ್ಷಕರ ಹುದ್ದೆ ಸೃಷ್ಟಿ. (ಹಾಲಿ ಇರುವ ತಲಾ 1 ಪ್ರಥಮ ದರ್ಜೆ ಸಹಾಯಕ ಹುದ್ದೆಯನ್ನು ಮೇಲ್ದರ್ಜೆಗೇರಿಸಿರುವುದರಿಂದ)

11. ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿಗೆ 1 ಲೇ ಸೆಕ್ರೆಟರಿ ಹುದ್ದೆ ಸೃಷ್ಟಿಸಲು ಸರ್ಕಾರವು ಮಂಜೂರಾತಿ ನೀಡಿದೆ.

**ವೈದ್ಯಕೀಯ ಚಿಕಿತ್ಸಾ ಸೌಲಭ್ಯ :**

ಈ ಇಲಾಖೆಗೆ ಸಂಬಂಧಿಸಿದಂತೆ ರಾಜ್ಯದಾದ್ಯಂತ 69 ಆಸ್ಪತ್ರೆಗಳು, ಮತ್ತು 529 ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿದ್ದು ಪದ್ಧತಿವಾರು ವಿವರಗಳನ್ನು ಕೆಳಗೆ ನೀಡಲಾಗಿದೆ.

| ಪದ್ಧತಿಯ ಹೆಸರು | ಆಸ್ಪತ್ರೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ | ಔಷಧಾಲಯಗಳ ಸಂಖ್ಯೆ |
|---|---|---|---|
| ಆಯುರ್ವೇದ | 51 | 942 | 461 |
| ಯುನಾನಿ | 09 | 157 | 043 |
| ಹೋಮಿಯೋಪತಿ | 03 | 060 | 020 |
| ಪ್ರಕೃತಿ ಚಿಕಿತ್ಸೆ | 02 | 016 | 005 |
| ಯೋಗ | 03 | 015 | - |
| ಸಿದ್ಧ | 01 | 010 | - |
| ಒಟ್ಟು | 69 | 1200 | 529 |

**ಆಯುರ್ವೇದ :**

ರಾಜ್ಯದಲ್ಲಿ ಒಟ್ಟು 11 ಜಿಲ್ಲಾ ಆಸ್ಪತ್ರೆಗಳು ಇದ್ದು. ಅವುಗಳಲ್ಲಿ ಈ ಕೆಳ ಕಂಡ ಮೂರು ಆಸ್ಪತ್ರೆಗಳು ಮಾತ್ರ ಆಯುರ್ವೇದ ಕಾಲೇಜುಗಳಿಗೆ ಹೊಂದಿಕೊಂಡಂತೆ ಬೋಧಕ ಆಸ್ಪತ್ರೆಗಳಾಗಿ ಕಾರ್ಯ ನಿರ್ವಹಿಸುತ್ತಿವೆ. ಅವುಗಳ ವಿವರ ಈ ಕೆಳಕಂಡಂತಿದೆ

| | ಹಾ. ಸಂ |
|---|---|
| 1. ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು | 225 |
| 2. ಸರ್ಕಾರಿ ಆಯುರ್ವೇದ ವೈದ್ಯಕೀಯ ಆಸ್ಪತ್ರೆ, ಮೈಸೂರು | 140 |
| 3. ಸರ್ಕಾರಿ ತಾರಾನಾಥ ಆಯುರ್ವೇದ ಆಸ್ಪತ್ರೆ ಬಳ್ಳಾರಿ | 70 |

ಅಲ್ಲದೆ ಉಳಿದ ಆಸ್ಪತ್ರೆಗಳು ಜಿಲ್ಲಾ. ತಾಲ್ಲೂಕು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಅವುಗಳ ವಿವರಗಳನ್ನು ಕೆಳಕಂಡಂತೆ ನೀಡಲಾಗಿದೆ.

| ಕ್ರಮ ಸಂ. | ನಗರ ಪ್ರದೇಶ (ಜಿಲ್ಲಾ ಮಟ್ಟ) | ಹಾಸಿಗೆಗಳ ಸಂಖ್ಯೆ | ಕ್ರಮ ಸಂ. | ಗ್ರಾಮಾಂತರ ಪ್ರದೇಶ | ಹಾಸಿಗೆಗಳ ಸಂಖ್ಯೆ |
|---|---|---|---|---|---|
| 1. | ಬಿಜಾಪುರ | 50 | 1. | ಹೂಲಿ, ಬೆಳಗಾಂ ಜಿಲ್ಲೆ | 10 |
| 2. | ಶಿವಮೊಗ್ಗ | 40 | 2. | ಬೆಳಗುಂಬ. ಹಾಸನ ಜಿಲ್ಲೆ | 06 |
| 3. | ಹುಬ್ಬಳ್ಳಿ | 25 | 3. | ಯರದಕೆರೆ ಚಿಕ್ಕಮಗಳೂರು ಜಿಲ್ಲೆ | 10 |
| 4. | ಕಾರವಾರ | 10 | 4. | ಐಮಂಗಲ. ಚಿತ್ರದುರ್ಗ ಜಿಲ್ಲೆ | 06 |
| 5. | ಮಂಡ್ಯ | 25 | 5. | ಮಂಚಲದೊರೆ. ತುಮಕೂರು ಜಿಲ್ಲೆ | 06 |
| 6. | ಹಾಸನ | 25 | 6. | ಕಮಲಾಪುರ. ಗುಲ್ಬರ್ಗಾ ಜಿಲ್ಲೆ | 06 |
| 7. | ಮಡಿಕೇರಿ | 10 | 7. | ಹದಿನಾರು. ಮೈಸೂರು ಜಿಲ್ಲೆ | 06 |
| 8. | ತುಮಕೂರು | 15 | 8 | ಗಿಣಿಗೇರಾ. ರಾಯಚೂರು ಜಿಲ್ಲೆ | 06 |
| | | | 9. | ಮಾರೇನಹಳ್ಳಿ, ಬೆಂಗಳೂರು ಉತ್ತರ | 06 |
| | | | 10. | ಕಟ್ಟಾಯ, ಹಾಸನಜಿಲ್ಲೆ | 06 |
| | | | 11. | ತೋಕೂರು. ಜೋಕಟ್ಟೆ, ಉತ್ತರ ಕನ್ನಡ | 06 |





ತಾಲ್ಲೂಕು ಮಟ್ಟ

| | | |
|---|---|---|
| 1. | ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | 06 |
| 2. | ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ | 10 |
| 3. | ಹೊಳೆನರಸೀಪುರ, ಹಾಸನಜಿಲ್ಲೆ | 10 |
| 4. | ಸಂಡೂರು, ಬಳ್ಳಾರಿ ಜಿಲ್ಲೆ | 06 |
| 5. | ಮಾಗಡಿ, ಬೆಂಗಳೂರು ಗ್ರಾ. ಜಿಲ್ಲೆ | 10 |
| 6. | ಕನಕಪುರ, ಬೆಂಗಳೂರು ಗ್ರಾ. ಜಿಲ್ಲೆ | 06 |
| 7. | ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾ. ಜಿಲ್ಲೆ | 06 |
| 8. | ಶ್ರೀನಿವಾಸಪುರ, ಕೋಲಾರ ಜಿಲ್ಲೆ | 10 |
| 9. | ತಿಪಟೂರು, ತುಮಕೂರು ಜಿಲ್ಲೆ | 10 |
| 10. | ಚಾಮರಾಜನಗರ, ಮೈಸೂರು ಜಿಲ್ಲೆ | 10 |
| 11. | ಕಡೂರು, ಚಿಕ್ಕಮಗಳೂರು ಜಿಲ್ಲೆ | 10 |
| 12. | ಮಳವಳ್ಳಿ, ಮಂಡ್ಯ ಜಿಲ್ಲೆ | 06 |
| 13. | ವೀರಾಜಪೇಟೆ. ಕೊಡಗು ಜಿಲ್ಲೆ | 10 |
| 14. | ಬೈಲಹೊಂಗಲ, ಬೆಳಗಾಂ ಜಿಲ್ಲೆ | 06 |
| 15. | ಅಥಣಿ : ಬೆಳಗಾಂ ಜಿಲ್ಲೆ | 06 |
| 16. | ಬೆಟಗೇರಿ, ಧಾರವಾಡ ಜಿಲ್ಲೆ | 10 |
| 17. | ಜಮಖಂಡಿ, ಬಿಜಾಪುರ ಜಿಲ್ಲೆ | 10 |
| 18. | ಬಾಗಲಕೋಟೆ, ವಿಜಾಪುರ ಜಿಲ್ಲೆ | 10 |
| 19. | ಬೀಳಗಿ, ಉತ್ತರಕನ್ನಡ ಜಿಲ್ಲೆ | 06 |
| 20. | ಸಿರಸಿ, ಉತ್ತರ ಕನ್ನಡ ಜಿಲ್ಲೆ | 10 |
| 21. | ಅಫ್‌ಜಲ್‌ಪುರ, ಗುಲ್ಬರ್ಗಾ ಜಿಲ್ಲೆ | 10 |
| 22. | ಗಂಗಾವತಿ, ರಾಯಚೂರು ಜಿಲ್ಲೆ | 10 |
| 23. | ಹಿರಿಯೂರು, ಚಿತ್ರದುರ್ಗ ಜಿಲ್ಲೆ | 10 |
| 24. | ಚಿಂತಾಮಣಿ, ಕೋಲಾರ ಜಿಲ್ಲೆ | 06 |
| 25. | ರಾಣೆಬೆನ್ನೂರು, ಧಾರವಾಡ ಜಿಲ್ಲೆ | 06 |
| 26. | ಹರಪನಹಳ್ಳಿ, ಬಳ್ಳಾರಿ ಜಿಲ್ಲೆ | 06 |
| 27. | ಹೊಸಪೇಟೆ, ಬಳ್ಳಾರಿ ಜಿಲ್ಲೆ | 10 |
| 28. | ಶಿಗ್ಗಾಂವ್, ಧಾರವಾಡ ಜಿಲ್ಲೆ | 06 |
| 29. | ನಂಜನಗೂಡು, ಮೈಸೂರು ಜಿಲ್ಲೆ | 06 |

ಇವುಗಳಲ್ಲದೆ ರಾಜ್ಯದಾದ್ಯಂತ 529 ಆಯುರ್ವೇದ ಚಿಕಿತ್ಸಾಲಯಗಳು ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಯುನಾನಿ :

ರಾಜ್ಯದಲ್ಲಿ 9 ಯುನಾನಿ ಆಸ್ಪತ್ರೆಗಳು ಮತ್ತು 43 ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ. ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿ 75 ಹಾಸಿಗೆಗಳ ಯುನಾನಿ ವಿಭಾಗವು ಕಾರ್ಯ ನಿರ್ವಹಿಸುತ್ತಿದ್ದು, ಈ ವಿಭಾಗವು ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಗಳಿಗೆ ಬೋಧನಾ ಆಸ್ಪತ್ರೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಇನ್ನುಳಿದ ಆಸ್ಪತ್ರೆಗಳ ವಿವರ ಈ ಕೆಳಕಂಡಂತೆ ಇದೆ.

| ಕ್ರ. ಸಂ | ಆಸ್ಪತ್ರೆಗಳು | ಹಾಸಿಗೆಗಳ ಸಂಖ್ಯೆ |
|---|---|---|
| 1. | ಸರ್ಕಾರಿ ಆಯುರ್ವೇದ ವೈದ್ಯಕೀಯ ಆಸ್ಪತ್ರೆ ಮೈಸೂರು | 20 |
| 2. | ಸರ್ಕಾರಿ ಯುನಾನಿ ಆಸ್ಪತ್ರೆ, ರಾಯಚೂರು | 10 |
| 3. | ಸರ್ಕಾರಿ ಯುನಾನಿ ಆಸ್ಪತ್ರೆ, ತುಮಕೂರು | 10 |
| 4. | ಸರ್ಕಾರಿ ಯುನಾನಿ ಆಸ್ಪತ್ರೆ, ಬಿಜಾಪುರ | 10 |
| 5. | ಸರ್ಕಾರಿ ಯುನಾನಿ ಆಸ್ಪತ್ರೆ, ರಾಮನಗರ ಬೆಂಗಳೂರು ಗ್ರಾಮಾಂತರ ಜಿಲ್ಲೆ | 10 |
| 6. | ಸರ್ಕಾರಿ ಯುನಾನಿ ಆಸ್ಪತ್ರೆ, ತಿಮ್ಮಾಪುರ ರಂಗಂಪೇಟೆ, ಗುಲ್ಬರ್ಗಾ ಜಿಲ್ಲಾ | 06 |
| 7. | ಸರ್ಕಾರಿ ಯುನಾನಿ ಆಸ್ಪತ್ರೆ, ರಾಜಲ್‌ಬಂಡಾ ರಾಯಚೂರು ಜಿಲ್ಲೆ | 06 |
| 8. | ಸರ್ಕಾರಿ ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆ, ಶಿವಮೊಗ್ಗ | 10 |

ಇದಲ್ಲದೆ, ಬೆಂಗಳೂರಿನ ಶ್ರೀ ಜಯರಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಕೇಂದ್ರ ಸರ್ಕಾರದ ವತಿಯಿಂದ ಒಂದು ಯುನಾನಿ ಚಿಕಿತ್ಸಾ ಸಂಶೋಧನಾ ಘಟಕವು ಕಾರ್ಯ ನಿರ್ವಹಿಸುತ್ತಿದೆ.

ಹೋಮಿಯೋಪತಿ :

ಬೆಂಗಳೂರಿನಲ್ಲಿರುವ 40 ಹಾಸಿಗೆಗಳ ಸರ್ಕಾರಿ ಹೋಮಿಯೋಪತಿ ಆಸ್ಪತ್ರೆಯು ಕಾರ್ಯ ನಿರ್ವಹಿಸುತ್ತಿದ್ದು ಈ ಆಸ್ಪತ್ರೆಯನ್ನು ಸರ್ಕಾರಿ ಹೋಮಿಯೋಪತಿ ವೈದ್ಯಕೀಯ

ಮಹಾವಿದ್ಯಾಲಯದ ವಿದ್ಯಾರ್ಥಿಗಳಿಗೆ ಬೋಧನಾ ಆಸ್ಪತ್ರೆಯಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ. ಇದಲ್ಲದೆ. ಸೋಮವಾರಪೇಟೆ. ಕೊಡಗು ಜಿಲ್ಲೆ ಮತ್ತು ಹಾಸನ ಇಲ್ಲಿ ತಲಾ 10 ಹಾಸಿಗೆಗಳ ಹೋಮಿಯೋಪತಿ ಆಸ್ಪತ್ರೆಗಳು ಕಾರ್ಯ ನಿರ್ವಹಿಸುತ್ತಿವೆ. ಇದಲ್ಲದೆ 20 ಔಷಧಾಲಯಗಳು ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

**ಪ್ರಕೃತಿ ಚಿಕಿತ್ಸೆ :**

ಮೈಸೂರು ಮತ್ತು ಬೆಂಗಳೂರಿನಲ್ಲಿ ಕ್ರಮವಾಗಿ 6 ಮತ್ತು 10 ಹಾಸಿಗೆಗಳ ಪ್ರಕೃತಿ ಚಿಕಿತ್ಸಾ ಆಸ್ಪತ್ರೆಗಳು ಕಾರ್ಯ ನಿರ್ವಹಿಸುತ್ತಿವೆ. 5 ಪ್ರಕೃತಿ ಚಿಕಿತ್ಸಾ ಚಿಕಿತ್ಸಾಲಯಗಳು ರಾಜ್ಯದ ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

**ಯೋಗ :**

ಬೆಂಗಳೂರು. ಮೈಸೂರು ಮತ್ತು ಬಳ್ಳಾರಿಯಲ್ಲಿನ ಸರ್ಕಾರಿ ಆಯುರ್ವೇದ ಕಾಲೇಜುಗಳಿಗೆ ಹೊಂದಿಕೊಂಡಿರುವ ಆಸ್ಪತ್ರೆಗಳಲ್ಲಿ ಯೋಗ ಚಿಕಿತ್ಸೆಗಾಗಿ ಪ್ರತ್ಯೇಕವಾಗಿ 5 ಹಾಸಿಗೆಗಳನ್ನು ಒದಗಿಸಲಾಗಿದೆ. ಅಲ್ಲದೆ ಯೋಗ ಶಿಬಿರಗಳನ್ನು ಏರ್ಪಡಿಸಲಾಗುತ್ತಿದೆ.

**ಸಿದ್ಧ :**

10 ಹಾಸಿಗೆಗಳ ಸಿದ್ಧ ವಿಭಾಗವು ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ. ಇಲ್ಲಿ ಕಾರ್ಯ ನಿರ್ವಹಿಸುತ್ತಿದೆ.

**ಸಂಶೋಧನೆ :**

ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ. ಇಲ್ಲಿ ಕೆಲವು ಪ್ರಮುಖ ಖಾಯಿಲೆಗಳಿಗೆ (ಮಧುಮೇಹ) ಸಂಶೋಧನೆ ನಡೆಸಲಾಗುತ್ತಿದೆ.

**ವೈದ್ಯಕೀಯ ಶಿಕ್ಷಣ :**

ರಾಜ್ಯದಲ್ಲಿ ಒಟ್ಟು ಮೂರು ಸರ್ಕಾರಿ ಹಾಗೂ 19 ಖಾಸಗಿ ಆಯುರ್ವೇದ ಕಾಲೇಜುಗಳಿವೆ. ಖಾಸಗಿ ಕಾಲೇಜುಗಳಲ್ಲಿ 5 ಕಾಲೇಜುಗಳು ಅನುದಾನ ಪಡೆಯುವ ಕಾಲೇಜುಗಳಾಗಿವೆ ಕಾಲೇಜುಗಳ ಹೆಸರು. ಪ್ರವೇಶ ಸಂಖ್ಯೆ ಇತ್ಯಾದಿ ವಿವರಗಳು ಈ ಕೆಳಕಂಡಂತೆ ಇವೆ.

| | ಸರ್ಕಾರಿ ಕಾಲೇಜು | ಪ್ರವೇಶ ಸಂಖ್ಯೆ |
|---|---|---|
| 1. | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು | 60 |
| 2. | ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ, ಮೈಸೂರು | 50 |



4

3. ಸರ್ಕಾರಿ ತಾರಾನಾಥ ಆಯುರ್ವೇದ ಮಹಾ ವಿದ್ಯಾಲಯ, ಬಳ್ಳಾರಿ 25

**ಖಾಸಗಿ ಅನುದಾನಿತ ಕಾಲೇಜುಗಳು**

4. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ಕಾಲೇಜು, ಉಡುಪಿ, ದಕ್ಷಿಣ ಕನ್ನಡ 60
5. ಆಯುರ್ವೇದ ಮಹಾವಿದ್ಯಾಲಯ, ಹುಬ್ಬಳ್ಳಿ 50
6. ಶ್ರೀ ಬಿ.ಎಂ.ಕೆ. ಆಯುರ್ವೇದ ಮಹಾ ವಿದ್ಯಾಲಯ ಬೆಳಗಾಂ 50
7. ಶ್ರೀ ಡಿ. ಜಿ. ಮೇಲ್ಮಳಗಿ ಆಯುರ್ವೇದ ಮಹಾವಿದ್ಯಾಲಯ, ಗದಗ 50
8. ಆಯುರ್ವೇದ ಮಹಾವಿದ್ಯಾಲಯ, ಬಿಜಾಪುರ 50

**ಅನುದಾನ ರಹಿತ ಖಾಸಗಿ ಆಯುರ್ವೇದ ಕಾಲೇಜುಗಳು**

9. ಶ್ರೀ ಎ.ಎಲ್.ಎನ್. ಆಯುರ್ವೇದ ಕಾಲೇಜು, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ 40
10. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಬೀದರ್ 40
11. ಶ್ರೀ ತೆಗ್ಗಿನಮಠ ಆರ್ಟ್ಸ್ ಅಂಡ್ ಎಜುಕೇಶನ್ ಸಂಸ್ಥೆ ಆಯುರ್ವೇದ ಕಾಲೇಜ್, ಹೊಸಪೇಟೆ 30
12. ಶ್ರೀ ಎಸ್. ವಿ. ಎಸ್. ಆಯುರ್ವೇದ ವೈದ್ಯಕೀಯ ಕಾಲೇಜು, ಮುಂಡರಗಿ, ಧಾರವಾಡ ಜಿಲ್ಲೆ 25
13. ಶ್ರೀ ವಿಜಯ ಮಹಂತೇಶ್ ವಿದ್ಯಾವರ್ಧಕ ಸಂಸ್ಥೆ ಆಯುರ್ವೇದ ಕಾಲೇಜ್, ಇಳಕಲ್, ಬಿಜಾಪುರ ಜಿಲ್ಲೆ 25
14. ಅಶ್ವಿನಿ ಯಜುಕೇಶನ್ ಸೊಸೈಟಿ ಆಯುರ್ವೇದ ಕಾಲೇಜು, ದಾವಣಗೆರೆ, ಚಿತ್ರದುರ್ಗ ಜಿಲ್ಲೆ 50
15. ಶ್ರೀ ತೆಗ್ಗಿನಮಠ ಆರ್ಟ್ಸ್ ಅಂಡ್ ಎಜುಕೇಷನ್ ಸಂಸ್ಥೆ ಆಯುರ್ವೇದ ಕಾಲೇಜು, ಭದ್ರಾವತಿ 50
16. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ವೈದ್ಯಕೀಯ ಕಾಲೇಜು, ಹಾಸನ 50

17. ಜಗದ್ಗುರು ತೋಂಟಾರಾಧ್ಯ ವಿದ್ಯಾಪೀಠ
ಆಯುರ್ವೇದ ಕಾಲೇಜು, ಹಾವೇರಿ, ಧಾರವಾಡ ಜಿಲ್ಲೆ 25

18. ಲಯನ್ಸ್ ಸ್ವಾಮಿ ವಿವೇಕಾನಂದ ಎಜುಕೇಷನ್
ಸೊಸೈಟಿ, ಆಯುರ್ವೇದ ಕಾಲೇಜು, ಗಜೇಂದ್ರಗಡ 25

19. ಬಿ.ಎಸ್.ಎಂ. ರೂರಲ್
ಆಯುರ್ವೇದ ವೈದ್ಯಕೀಯ ಕಾಲೇಜು, ಬಿಜಾಪುರ 25

20. ಶ್ರೀ ಕಾಳೀದಾಸ ಎಜುಕೇಷನ್ ಸೊಸೈಟಿ
ಆಯುರ್ವೇದ ವೈದ್ಯಕೀಯ ಕಾಲೇಜು, ಬಾದಾಮಿ 25

21. ರಾಜೀವಗಾಂಧಿ ಶಿಕ್ಷಣ ಸಂಸ್ಥೆ
ಆಯುರ್ವೇದ ವೈದ್ಯಕೀಯ ಕಾಲೇಜು,
ರೋಣ, ಧಾರವಾಡ ಜಿಲ್ಲೆ 25

22. ಶ್ರೀ ಮಹಾಗಣಪತಿ ಎಜುಕೇಷನ್ ಟ್ರಸ್ಟ್
ಆಯುರ್ವೇದ ವೈದ್ಯಕೀಯ ಕಾಲೇಜು, ಧಾರವಾಡ 40

ಬೆಂಗಳೂರು ಮತ್ತು ಮೈಸೂರಿನ ಸರ್ಕಾರಿ ಆಯುರ್ವೇದ ಕಾಲೇಜುಗಳಲ್ಲಿ ಈ ಕೆಳಕಂಡ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಕೋರ್ಸುಗಳನ್ನು ನಡೆಸಲಾಗುತ್ತಿದೆ.

1. ಸರ್ಕಾರಿ ಆಯುರ್ವೇದ ವೈದ್ಯಕೀಯ
ಮಹಾವಿದ್ಯಾಲಯ, ಬೆಂಗಳೂರು
   1. ದ್ರವ್ಯಗುಣ
   2. ಶಲ್ಯ ತಂತ್ರ
   3. ಶಾಲಾಕ್ಯ ತಂತ್ರ

2. ಸರ್ಕಾರಿ ಆಯುರ್ವೇದ ವೈದ್ಯಕೀಯ
ಮಹಾವಿದ್ಯಾಲಯ, ಮೈಸೂರು
   1. ಕಾಯಚಿಕಿತ್ಸಾ

ಈ ಮೇಲ್ಕಂಡ ಎಲ್ಲಾ ಸ್ನಾತಕೋತ್ತರ ವಿಷಯಗಳಿಗೆ ಪ್ರವೇಶ ಸಂಖ್ಯೆಯು 07 ಆಗಿರುತ್ತದೆ.

**ಯುನಾನಿ :**

ಬೆಂಗಳೂರಿನಲ್ಲಿರುವ ಸರ್ಕಾರಿ ಯುನಾನಿ ಮಹಾವಿದ್ಯಾಲಯವು 1975ನೇ ವರ್ಷದಿಂದ ಕಾರ್ಯ ನಿರ್ವಹಿಸುತ್ತಿದ್ದು, ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆ ಹೊಂದಿರುತ್ತದೆ. ಇಲ್ಲಿನ ಪ್ರವೇಶ ಸಂಖ್ಯೆ : 50 ಆಗಿರುತ್ತದೆ.

ಹೋಮಿಯೋಪತಿ :

ರಾಜ್ಯದಲ್ಲಿ ಒಂದು ಸರ್ಕಾರಿ ಹಾಗೂ 11 ಖಾಸಗಿ ಹೋಮಿಯೋಪತಿ ಮಹಾವಿದ್ಯಾಲಯಗಳಿದ್ದು ಅವುಗಳ ವಿವರಗಳು ಈ ಕೆಳಕಂಡಂತೆ ಇವೆ.

| | ಕಾಲೇಜುಗಳ ವಿವರ | ಪ್ರವೇಶ ಸಂಖ್ಯೆ |
|---|---|---|
| 1. | ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯ, ಬೆಂಗಳೂರು | 30 |
| 2. | ಎ.ಎಂ. ಶೇಕ್ ಹೋಮಿಯೋಪತಿ ವೈದ್ಯಕೀಯ ಕಾಲೇಜು ಬೆಳಗಾಂ | 100 |
| 3. | ಭರತೇಶ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಳಗಾಂ | 40 |
| 4. | ಮರಾಠ ಮಂಡಲ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಳಗಾಂ | 40 |
| 5. | ಶ್ರೀ ರಾಜೀವಗಾಂಧಿ ಮೆಮೋರಿಯಲ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಹುಬ್ಬಳ್ಳಿ | 25 |
| 6. | ಮೌಲಾನಾ ಅಜಾದ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಹುಬ್ಬಳ್ಳಿ | 40 |
| 7. | ಹೆಚ್. ಕೆ. ಇ. ಸೊಸೈಟೀಸ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಗುಲ್ಬರ್ಗ | 50 |
| 8. | ಫಾದರ್ ಮುಲ್ಲರ್ಸ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಮಂಗಳೂರು | 50 |
| 9. | ಐ.ಇ.ಎ. ಹೋಮಿಯೋಪತಿ ವೈದ್ಯಕೀಯ ಕಾಲೇಜು, ಧಾರವಾಡ | 40 |
| 10. | ಆದ್ಯಶ್ರೀ ನಿಜಲಿಂಗೇಶ್ವರ ಶಿಕ್ಷಣ ಸಂಸ್ಥೆ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಸಂಕೇಶ್ವರ | 25 |
| 11. | ಆಲ್-ಅಮಿನ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬಿಜಾಪುರ | 25 |
| 12. | ನ್ಯಾಷನಲ್ ಹೋಮಿಯೋಪತಿ ವೈದ್ಯಕೀಯ ಕಾಲೇಜು ಧಾರವಾಡ | 25 |

**ಪ್ರಕೃತಿ ಚಿಕಿತ್ಸೆ :**

ಆಯುರ್ವೇದ ಪದವೀಧರರಿಗೆ 2 ವರ್ಷಗಳ ಅವಧಿಯ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಡಿಪ್ಲೋಮಾ ಕೋರ್ಸ್‌ನ್ನು ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ. ಮೈಸೂರು ಇಲ್ಲಿ ನಡೆಸಲಾಗುತ್ತಿದೆ. ಇದರ ಪ್ರವೇಶ ಸಂಖ್ಯೆ : 12 ಇದಲ್ಲದೆ. ದಕ್ಷಿಣ ಕನ್ನಡ ಜಿಲ್ಲೆಯ ಉಜಿರೆಯಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಮಹಾವಿದ್ಯಾಲಯವು ಕಾರ್ಯ ನಿರ್ವಹಿಸುತ್ತಿದೆ. ಇಲ್ಲಿನ ಪ್ರವೇಶ ಸಂಖ್ಯೆ : 40 ಆಗಿರುತ್ತದೆ.

**ಔಷಧ ನಿಯಂತ್ರಣ :**

ಈ ಇಲಾಖೆಯು ಆಯುರ್ವೇದ. ಯುನಾನಿ ಮತ್ತು ಹೋಮಿಯೋಪತಿ ಔಷಧಗಳ ತಯಾರಿಕೆ ಮತ್ತು ಮಾರಾಟವನ್ನು 1976ನೇ ಡಿಸೆಂಬರ್ ಮಾಹೆಯಿಂದ ಔಷಧ ಮತ್ತು ಕಾಂತಿವರ್ಧಕ ಕಾಯ್ದೆ 1940ರ ಅಡಿಯಲ್ಲಿ ನಿಯಂತ್ರಿಸಲಾಗುತ್ತಿದೆ.

ದಿನಾಂಕ : 01-03-95ರವರೆಗೆ ನೀಡಲಾಗಿರುವ ಔಷಧ ತಯಾರಿಕಾ ಮತ್ತು ಮಾರಾಟ ಪರವಾನಿಗೆಗಳ ವಿವರ ಕೆಳಕಂಡಂತೆ ಇದೆ.

| ಪದ್ಧತಿಗಳು | ತಯಾರಿಕಾ ಪರವಾನಿಗೆಗಳ ಸಂಖ್ಯೆ | ಲೋನ್ ಲೈಸೆನ್ಸ್ ಸಂಖ್ಯೆ | ಮಾರಾಟ ಪರವಾನಿಗೆ ಸಂಖ್ಯೆ | |
|---|---|---|---|---|
| | | | ಸಗಟು | ಚಿಲ್ಲರೆ |
| ಆಯುರ್ವೇದ | 231 | 19 | - | - |
| ಯುನಾನಿ | 11 | 01 | - | - |
| ಹೋಮಿಯೋಪತಿ | 12 | - | 74 | 95 |
| ಒಟ್ಟು | 254 | 20 | 74 | 95 |

**ಸರ್ಕಾರಿ ಕೇಂದ್ರಿಯ ಔಷಧಾಗಾರ, ಬೆಂಗಳೂರು :**

ಈ ಸಂಸ್ಥೆಯಲ್ಲಿ ಆಯುರ್ವೇದ ಮತ್ತು ಯುನಾನಿ ಔಷಧಗಳನ್ನು ತಯಾರಿಸಿ ರಾಜ್ಯದಲ್ಲಿರುವ ಎಲ್ಲಾ ಸರ್ಕಾರಿ ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆಗಳು ಹಾಗೂ ಔಷಧಾಲಯಗಳಿಗೆ ಔಷಧಿ ಖರೀದಿಯ ವೆಚ್ಚದ ಶೇಕಡಾ 60 ರಷ್ಟು ಔಷಧಿಗಳನ್ನು ಸರಬರಾಜು ಮಾಡಲಾಗುತ್ತಿದೆ. ಉಳಿದ ಶೇಕಡಾ 40 ರಷ್ಟು ಔಷಧಿಗಳು ಸರ್ಕಾರದಿಂದ ಅಂಗೀಕೃತ ದರಗುತ್ತಿಗೆ ಸಂಸ್ಥೆಗಳಿಂದ ಸರಬರಾಜಾಗುತ್ತದೆ.

**ಔಷಧ ಪರೀಕ್ಷಾ ಪ್ರಯೋಗಾಲಯ :**

ಸರ್ಕಾರಿ ಕೇಂದ್ರೀಯ ಔಷಧಾಗಾರದಲ್ಲಿ ತಯಾರಾದ ಔಷಧಗಳ ಗುಣಮಟ್ಟವನ್ನು ಪರೀಕ್ಷಿಸಲು ಔಷಧ ಪರೀಕ್ಷಾ ಪ್ರಯೋಗಾಲಯವನ್ನು ತೆರೆಯಲಾಗಿದೆ.

**ಔಷಧ ಗಿಡ ಮೂಲಿಕಾ ವನಗಳು :**

ಬೆಂಗಳೂರು, ಮೈಸೂರು ಮತ್ತು ಬಳ್ಳಾರಿ ಆಯುರ್ವೇದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಔಷಧ ಸಸ್ಯಗಳ ಪ್ರಾತ್ಯಕ್ಷಿಕ ಅನುಭವಗಳನ್ನು ನೀಡಲು ಔಷಧ ಗಿಡ ಮೂಲಿಕಾ ವನಗಳನ್ನು ಆಯಾ ಕಾಲೇಜುಗಳಲ್ಲಿ ಅಭಿವೃದ್ಧಿ ಪಡಿಸಲಾಗಿದೆ. ಇದಲ್ಲದೆ ಬೆಂಗಳೂರು ವಿಶ್ವವಿದ್ಯಾನಿಲಯದ ಸಮೀಪ ಔಷದಿ ಸಸ್ಯಗಳ ತೋಟವನ್ನು ಅಭಿವೃದ್ಧಿ ಪಡಿಸಲು ಸರ್ಕಾರದಿಂದ ಮಂಜೂರಾಗಿರುವ 37 ಎಕರೆ ಭೂಮಿಯಲ್ಲಿ "ಧನ್ವಂತ್ರಿ ವನ" ಎಂಬ ಹೆಸರಿನಲ್ಲಿ ಗಿಡ ಮೂಲಿಕಾ ತೋಟವನ್ನು ಅಭಿವೃದ್ಧಿ ಪಡಿಸಿದೆ. ಈ ತೋಟದಲ್ಲಿ ಸುಮಾರು 600 ವಿವಿಧ ಬಗೆಯ ಔಷಧ ಸಸ್ಯಗಳನ್ನು ಬೆಳೆಸಲಾಗಿದೆ.

**ವೈದ್ಯಕೀಯ ವೃತ್ತಿ :**

ರಾಜ್ಯದಲ್ಲಿ ವೈದ್ಯ ವೃತ್ತಿಯನ್ನು ನಿಯಂತ್ರಿಸಲು ಎರಡು ಶಾಸನ ಬದ್ಧ ಮಂಡಳಿಗಳು ಕಾರ್ಯ ನಿರ್ವಹಿಸುತ್ತಿವೆ. ಅವುಗಳೆಂದರೆ

1. ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೃತ್ತಿ ನಿರತ ಮಂಡಳಿ, ಬೆಂಗಳೂರು.

ಈ ಮಂಡಳಿಯು ಆಯುರ್ವೇದ, ಯುನಾನಿ, ಪ್ರಕೃತಿ ಚಿಕಿತ್ಸೆ ಮತ್ತು ಸಮ್ಮಿಶ್ರ ಪದ್ಧತಿಗಳಲ್ಲಿ ವೈದ್ಯ ವೃತ್ತಿಯನ್ನು ನಿಯಂತ್ರಿಸುತ್ತಿದೆ. ದಿನಾಂಕ : 01-03-95ರವರೆಗೆ ಈ ಮಂಡಳಿಯಲ್ಲಿ ವೈದ್ಯ ವೃತ್ತಿಗಾಗಿ ತಮ್ಮ ಹೆಸರುಗಳನ್ನು ಕೆಳಗಿನಂತೆ ನೊಂದಾಯಿಸಿಕೊಂಡಿರುತ್ತಾರೆ.

| | | |
|---|---|---|
| ಆಯುರ್ವೇದ | - | 10,943 |
| ಯುನಾನಿ | - | 732 |
| ಪ್ರಕೃತಿ ಚಿಕಿತ್ಸೆ | - | 004 |
| ಸಮ್ಮಿಶ್ರ ಪದ್ಧತಿ | - | 2,144 |
| ಒಟ್ಟು : | | 13,823 |

2. ಕರ್ನಾಟಕ ಹೋಮಿಯೋಪತಿ ವೈದ್ಯ ಮಂಡಳಿ, ಬೆಂಗಳೂರು

ಈ ಮಂಡಳಿಯು ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ವೈದ್ಯ ವೃತ್ತಿಯನ್ನು ನಿಯಂತ್ರಿಸುತ್ತಿದ್ದು ದಿನಾಂಕ : 01-03-95ರವರೆಗೆ ವೈದ್ಯ ವೃತ್ತಿಗಾಗಿ 5018 ವೈದ್ಯರುಗಳು ತಮ್ಮ ಹೆಸರುಗಳನ್ನು ನೊಂದಾಯಿಸಿಕೊಂಡಿರುತ್ತಾರೆ.

ನಿರ್ದೇಶಕರು
ಭಾರತೀಯ ವೈದ್ಯಪದ್ಧತಿಗಳು ಮತ್ತು
ಹೋಮಿಯೋಪತಿ ನಿರ್ದೇಶನಾಲಯ

ಔಷಧ ನಿಯಂತ್ರಣ ಇಲಾಖೆಯ
1994-95ನೇ ಸಾಲಿನ
(31ನೇ ಮಾರ್ಚ್ 1995ರವರೆಗೆ)
ವಾರ್ಷಿಕ ವರದಿ

# ಔಷಧ ನಿಯಂತ್ರಣ ಇಲಾಖೆಯ 1994-95ನೇ ಸಾಲಿನ (31ನೇ ಮಾರ್ಚ್ 1995ರವರೆಗೆ) ವಾರ್ಷಿಕ ವರದಿ

ರಾಜ್ಯದಲ್ಲಿ ತಯಾರಾಗುವ ಹಾಗೂ ಮಾರಾಟಕ್ಕಾಗಿ ಸರಬರಾಜು ಮಾಡಲಾಗುತ್ತಿರುವ ಔಷಧಗಳ ಮೇಲೆ ಕಟ್ಟು ನಿಟ್ಟಾದ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳುವುದರ ಹಾಗೂ ಎಚ್ಚರಿಕೆ ವಹಿಸುವುದರ ಮೂಲಕ ಗ್ರಾಹಕರ ಆರೋಗ್ಯವನ್ನು ಕಾಪಾಡುವುದು ಹಾಗೂ ಆರೋಗ್ಯ ರಕ್ಷಣೆಯ ಜವಾಬ್ದಾರಿ ಹೊರುವುದು ಮತ್ತು ಉತ್ತಮ ಗುಣಮಟ್ಟದ ಔಷಧಗಳು ನಿಯಂತ್ರಿತ ಬೆಲೆಗಳಲ್ಲಿ ದೊರಕುವಂತೆ ಮಾಡುವುದು ಔಷಧ ನಿಯಂತ್ರಣ ಇಲಾಖೆಯ ಮುಖ್ಯ ಕರ್ತವ್ಯವಾಗಿದೆ.

ಕರ್ನಾಟಕ ರಾಜ್ಯದ ಔಷಧ ನಿಯಂತ್ರಣ ಇಲಾಖೆಯು ಈ ಕೆಳಕಂಡ ಕಾಯ್ದೆಗಳನ್ನು ಜಾರಿಗೊಳಿಸುವುದರಲ್ಲಿ ಮಾಡಬೇಕಾದ ಶಾಸನಬದ್ಧ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಜಾರಿ.
2. ಔಷಧಗಳ (ಬೆಲೆ ನಿಯಂತ್ರಣ) ಆದೇಶ 1995, ಅವಶ್ಯ ವಸ್ತುಗಳ ಕಾಯ್ದೆಯಲ್ಲಿ ಹೊರಡಿಸಲಾಗಿರುವ ಆದೇಶ.
3. ಔಷಧ ಮತ್ತು ಮಂತ್ರೋಪಾಯ (ಆಕ್ಷೇಪಣೀಯ ಜಾಹಿರಾತು) ಅಧಿನಿಯಮ 1954 ಮತ್ತು ಅದರ ಮೇರೆಗಿನ ನಿಯಮಗಳು.
4. ಫಾರ್ಮಸಿ ಅಧಿನಿಯಮ 1948 ಮತ್ತು ವಿದ್ಯಾ ನಿಯಮಾವಳಿ.
5. ವಿಷವಸ್ತುಗಳ ಅಧಿನಿಯಮ 1919 ಮತ್ತು ಕರ್ನಾಟಕ ವಿಷವಸ್ತುಗಳ ಅಧಿನಿಯಮ 1996.
6. ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮ - ದಡಿಯಲ್ಲಿ ಬರುವ ಔಷಧಗಳಿಗೆ ಸಂಬಂಧಪಟ್ಟಂತೆ ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟುಮಾಡುವ ವಸ್ತುಗಳ ಅಧಿನಿಯಮ 1985.

ಮೇಲ್ಕಂಡ ಅಧಿನಿಯಮಗಳ ಪ್ರಕಾರ ಔಷಧ ನಿಯಂತ್ರಣ ಇಲಾಖೆಯ ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಪರವಾನಗಿ ನೀಡುವ ಸುವ್ಯವಸ್ಥೆಯ ಮೂಲಕ ಔಷಧಿ ತಯಾರಿಸುವ ಮತ್ತು ಮಾರಾಟ ಮಾಡುವ ಆವರಣಗಳಿಗೆ ಪರವಾನಗಿ ನೀಡುವುದು.

2. ನಕಲಿ ಔಷಧಗಳ ಮತ್ತು ಕಾಂತಿವರ್ಧಕಗಳ ತಯಾರಿಕೆಯಲ್ಲಿ ನಿರತರಾದವರ ಬಗ್ಗೆ ಪರಿವೀಕ್ಷಣಾ ಸಿಬ್ಬಂದಿ ವರ್ಗದವರು ಜಾಗರೂಕತೆ ವಹಿಸುವುದು.

3. ನಿಗಧಿಪಡಿಸಿದ ಗುಣಮಟ್ಟಗಳಿಗನುಸಾರವಾಗಿ ಔಷಧ ಮತ್ತು ಕಾಂತಿವರ್ಧಕ ವಸ್ತುಗಳು ಇವೆಯೇ ಎಂಬುದನ್ನು ಪರಿವೀಕ್ಷಿಸುವ ಸಲುವಾಗಿ ಔಷಧ ತಯಾರಿಕಾ ಹಾಗೂ ಮಾರಾಟ ಘಟಕಗಳಿಂದ ಔಷಧ ಮತ್ತು ಕಾಂತಿವರ್ಧಕಗಳ ಮಾದರಿಯನ್ನು ಪಡೆದುಕೊಂಡು ಅವುಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಅವುಗಳ ಗುಣಮಟ್ಟವನ್ನು ನಿಶ್ಚಯಪಡಿಸುವುದು.

ಔಷಧ ನಿಯಂತ್ರಣ ಇಲಾಖೆಯು ಮೂರು ಮುಖ್ಯ ಭಾಗಗಳನ್ನು ಹೊಂದಿದೆ.

1. ಆಡಳಿತ ಮತ್ತು ಅಮಲು ಜಾರಿ
2. ಔಷಧ ಪರೀಕ್ಷಾ ಪ್ರಯೋಗಶಾಲೆ
3. ಫಾರ್ಮಸಿ ಶಿಕ್ಷಣ

## (1) ಆಡಳಿತ ಮತ್ತು ಅಮಲು ಜಾರಿ :-

### (ಅ) ಕೇಂದ್ರ ಸ್ಥಾನ ಸಂಘಟನೆ

ಔಷಧ ನಿಯಂತ್ರಣ ಇಲಾಖೆಯ ಹಾಗೂ ನಿಯಂತ್ರಣಾ ಪ್ರಾಧಿಕಾರದ ಮುಖ್ಯಸ್ಥರಾಗಿ ಔಷಧ ನಿಯಂತ್ರಣಾಧಿಕಾರಿಯವರು ಕಾರ್ಯ ನಿರ್ವಹಿಸುತ್ತಿದ್ದಾರೆ. ಔಷಧ ನಿಯಂತ್ರಣಾಧಿಕಾರಿಯವರೊಂದಿಗೆ ಒಬ್ಬ ಅಪರ ಔಷಧ ನಿಯಂತ್ರಕರು. ಮೂವರು ಉಪ ಔಷಧ ನಿಯಂತ್ರಕರು ಮತ್ತು ಆರು ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳು ಹಾಗೂ ಐದು ಜನ ಔಷಧ ಪರೀಕ್ಷಕರುಗಳು ಕೇಂದ್ರ ಕಾರ್ಯಸ್ಥಾನದಲ್ಲಿದ್ದು ಸಹಕರಿಸುವರು. ರಾಜ್ಯದಲ್ಲಿ ಕಾಲಕಾಲಕ್ಕೆ ನಡೆಯುವ ಡಿಪ್ಲೊಮೊ ಫಾರ್ಮಸಿ ಪರೀಕ್ಷೆಗಳ ಸಲುವಾಗಿಯೇ ಪರೀಕ್ಷಾ ಪ್ರಾಧಿಕಾರ ಮಂಡಳಿಗೆ ಪ್ರತ್ಯೇಕವಾಗಿ ಒಬ್ಬ ಸಹಾಯಕ ಔಷಧ ನಿಯಂತ್ರಣಾಧಿಕಾರಿಯವರಿದ್ದಾರೆ.

### (ಆ) ವೃತ್ತ ಮತ್ತು ಜಿಲ್ಲಾ ಕಛೇರಿಗಳು

ಇಲಾಖೆಯ ಸುಸೂತ್ರ ಕಾರ್ಯನಿರ್ವಹಣೆಗೆ 15 ವೃತ್ತ ಕಾರ್ಯಾಲಯಗಳು ಮತ್ತು 8 ಜಿಲ್ಲೆಯಲ್ಲಿ ಒಂದು ಔಷಧ ಪರಿವೀಕ್ಷಕರ ಕಾರ್ಯಾಲಯವೂ ಕೆಲಸ ಮಾಡುತ್ತಿದೆ. ಪ್ರತಿ ವೃತ್ತ ಕಛೇರಿಯಲ್ಲಿಯೂ ಒಬ್ಬರು ಸಹಾಯಕ ಔಷಧ ನಿಯಂತ್ರಣಾಧಿಕಾರಗಳ ಆಡಳಿತಕ್ಕೆ ಒಳಪಟ್ಟಿದ್ದು ಜಿಲ್ಲೆಯ ಔಷಧ ಪರಿವೀಕ್ಷಕರು ಅವರಿಗೆ ಸಹಾಯಕರಾಗಿದ್ದು ಕಾರ್ಯ ನಿರ್ವಹಿಸುತ್ತಿದೆ. ವೃತ್ತ ಸಹಾಯಕ ಔಷಧ ನಿಯಂತ್ರಕರು ಔಷಧಗಳ ಮಾರಾಟ ಪರವಾನಗಿ ನೀಡುವಲ್ಲಿ ಪರವಾನಗಿ ಪ್ರಾಧಿಕಾರಿಯವರಾಗಿದ್ದಾರೆ.

ಇಲಾಖೆಯಲ್ಲಿರುವ ಪ್ರತಿಯೊಂದು ವೃತ್ತ ಕಛೇರಿಯೂ 1 ಅಥವಾ 2 ಜಿಲ್ಲೆಗಳ ಕಾರ್ಯ ವ್ಯಾಪ್ತಿಯ ಕ್ಷೇತ್ರಾಧಿಕಾರ ಹೊಂದಿರುತ್ತದೆ. ಈ ಬಗೆಗಿನ ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಸಹಾಯಕ ಔಷಧ ನಿಯಂತ್ರಕರ ವೃತ್ತ ಕಛೇರಿಗಳು | | ಪ್ರತಿ ವೃತ್ತ ಕಛೇರಿಗೆ ಒಳಪಟ್ಟಿರುವ ಜಿಲ್ಲೆಗಳು |
|---|---|---|---|
| 1. | ಬೆಂಗಳೂರು ವೃತ್ತ - I | } | ಬೆಂಗಳೂರು ನಗರ |
| 2. | ಬೆಂಗಳೂರು ವೃತ್ತ - II | | |
| 3. | ಬೆಂಗಳೂರು ವೃತ್ತ - III | | |
| 4. | ಬೆಂಗಳೂರು ವೃತ್ತ - IV | | ಬೆಂಗಳೂರು ಗ್ರಾಮಾಂತರ ಮತ್ತು ಕೋಲಾರ ಜಿಲ್ಲೆ |
| 5. | ಮೈಸೂರು ವೃತ್ತ - I | - | ಮೈಸೂರು ನಗರ ಮತ್ತು ಕೊಡಗು ಜಿಲ್ಲೆ |
| 6. | ಮೈಸೂರು ವೃತ್ತ - II | - | ಮೈಸೂರು ಗ್ರಾಮಾಂತರ ಮತ್ತು ಮಂಡ್ಯ ಜಿಲ್ಲೆ |
| 7. | ಬಳ್ಳಾರಿ ವೃತ್ತ | - | ಬಳ್ಳಾರಿ ಮತ್ತು ರಾಯಚೂರು ಜಿಲ್ಲೆ |
| 8. | ತುಮಕೂರು ವೃತ್ತ | - | ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆ |
| 9. | ಗುಲ್ಬರ್ಗ ವೃತ್ತ | - | ಗುಲ್ಬರ್ಗ ಮತ್ತು ಬೀದರ್ ಜಿಲ್ಲೆ |
| 10. | ಬಿಜಾಪುರ ವೃತ್ತ | - | ಬಿಜಾಪುರ ಜಿಲ್ಲೆ |
| 11. | ಬೆಳಗಾಂ ವೃತ್ತ | - | ಬೆಳಗಾಂ ಮತ್ತು ಉತ್ತರ ಕನ್ನಡ ಜಿಲ್ಲೆ |
| 12. | ಧಾರವಾಡ ವೃತ್ತ | - | ಧಾರವಾಡ ಜಿಲ್ಲೆ |
| 13. | ಮಂಗಳೂರು ವೃತ್ತ | - | ದಕ್ಷಿಣ ಕನ್ನಡ ಜಿಲ್ಲೆ |
| 14. | ಹಾಸನ ವೃತ್ತ | - | ಹಾಸನ್ ಮತ್ತು ಚಿಕ್ಕಮಗಳೂರು ಜಿಲ್ಲೆ |
| 15. | ಶಿವಮೊಗ್ಗ ವೃತ್ತ | - | ಶಿವಮೊಗ್ಗ ಜಿಲ್ಲೆ |

## 1994-95 ಸಾಲಿನ ಪ್ರಮುಖ ಸಾಧನೆಗಳು

**ಅಮಲು ಜಾರಿ :-**

ಸರ್ಕಾರವು ಔಷಧ ಪರಿವೀಕ್ಷಕರ ಜಿಲ್ಲಾ ಕಛೇರಿಗಳನ್ನು ಸಹಾಯಕ ಔಷಧ ನಿಯಂತ್ರಕರ ವೃತ್ತ ಕಛೇರಿಗಳನ್ನಾಗಿ ಮೇಲ್ದರ್ಜೆಗೇರಿಸಲು ಅನುಮತಿ ನೀಡಿದೆ. ಇದಕ್ಕಾಗಿ 15.00 ಲಕ್ಷ ರೂಪಾಯಿಗಳ ಮಂಜೂರಾತಿ ನೀಡಿದೆ.

**ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮಗಳ ಜಾರಿ**

1994-95ನೇ (ಏಪ್ರಿಲ್ 1994 ರಿಂದ 31ನೇ ಮಾರ್ಚ್1995) ಅವಧಿಯಲ್ಲಿ ಈ ಅಧಿನಿಯಮ ಹಾಗೂ ಅದರ ಮೇರೆಗಿನ ನಿಯಮಗಳ ಮೇರೆಗೆ ಹೂಡಲಾದ ಕಾನೂನು ವ್ಯವಹರಣೆಗಳ ವಿವರಗಳು ಕೆಳಕಂಡಂತಿವೆ:-

| | | |
|---|---|---|
| 1. | ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು (1.4.94 ರಂದು) | 97 |
| 2. | 1994-95 ನೇ ಸಾಲಿಗೆ (31.3.95 ರ ತನಕ) ಹೂಡಿದ ಕಾನೂನು ವ್ಯವಹರಣೆಗಳು | 26 |
| 3. | ಒಟ್ಟು (31.3.95ರ ತನಕ) | 123 |
| 4. | ಇತ್ಯರ್ಥವಾದ ಕಾನೂನು ವ್ಯವಹರಣೆಗಳು (31.3.95 ರ ತನಕ) | 8 |
| | ಅ. ನಿರ್ದೋಷಿಯೆಂದು ತೀರ್ಮಾನವಾದ ಬಿಡುಗಡೆ ಮಾಡಲಾದ ಮೊಕದ್ದಮೆಗಳು (31.3.95ರ ತನಕ) | 6 |
| | ಆ. ದೋಷ ಸಿದ್ಧವಾದ ಮೊಕದ್ದಮೆಗಳು (31.3.95ರ ತನಕ) | 2 |
| 5. | 1995 ರ ಮಾರ್ಚ್ ಕಡೆಯಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು | 115 |

**1987ರ ಔಷಧಗಳ (ಬೆಲೆ ನಿಯಂತ್ರಣ) ಆದೇಶದ ಜಾರಿ :**

1994-95 ನೇ ಮಾರ್ಚ್ 31ರ ವರೆಗೆ ಈ ಆದೇಶದ ಜಾರಿಯ ಮೇರೆಗೆ ಹೂಡಲಾದ ಕಾನೂನು ವ್ಯವಹರಣೆಗಳ ಅಂಕಿ ಅಂಶಗಳು ಕೆಳಕಂಡಂತಿವೆ.

| | | |
|---|---|---|
| 1. | ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು (1.4.94 ರಂದು) | 36 |
| 2. | ಹೂಡಿದ ಕಾನೂನು ವ್ಯವಹರಣೆಗಳು (31.3.95 ರ ವರೆಗೆ) | 2 |
| 3. | ಒಟ್ಟು (31.3.95 ರ ವರೆಗೆ) | 38 |
| 4. | ತೀರ್ಮಾನವಾದ ಕಾನೂನು ವ್ಯವಹರಣೆಗಳು | 2 |
| | ಅ. ನಿರ್ದೋಷಿಯೆಂದು ತೀರ್ಮಾನವಾಗಿ ಬಿಡುಗಡೆಯಾದ ಪ್ರಕರಣಗಳು (31.3.95ರ ತನಕ) | 1 |
| | ಆ. ದೋಷ ಸಿದ್ದ ಪ್ರಕರಣಗಳು (31.3.95ರ ತನಕ) | 1 |
| 5. | ಇತ್ಯರ್ಥವಾಗದೆ ಉಳಿದಿರುವ ಕಾನೂನು ವ್ಯವಹರಣೆಗಳು (31.3.95 ರ ಅಂತ್ಯಕ್ಕೆ) | 36 |

1994-95ನೇ ಸಾಲಿನಲ್ಲಿ ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ 1-4-94 ರಿಂದ 31-3-95 ರವರೆಗೆ 94 ದೂರುಗಳು ಹಾಗೂ ಔಷಧಗಳ (ಬೆಲೆ ನಿಯಂತ್ರಣ) ಆದೇಶ 1987ರ ಪ್ರಕಾರ 11 ದೂರುಗಳು ಬಂದಿವೆ. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ ದೂರುಗಳನ್ನು ಹಾಗೂ ಔಷಧ (ಬೆಲೆ ನಿಯಂತ್ರಣ) ಆದೇಶ 1979 ಹಾಗೂ 1987 ರ ಪ್ರಕಾರ 8 ದೂರುಗಳನ್ನು ತನಿಖೆ ಮಾಡಿ ಈ ಬಗ್ಗೆ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗಿದೆ.

**ಔಷಧ ತಯಾರಿಕಾ ಘಟಕಗಳು :**

ಅಲೋಪತಿ ಔಷಧಗಳು ಮತ್ತು ಕಾಂತಿವರ್ಧಕಗಳ ಉತ್ಪಾದನಾ ಘಟಕಗಳು ಮತ್ತು ಅವುಗಳಿಗೆ ಕೊಟ್ಟ ಪರವಾನಗಿಗಳು ಕೆಳಕಂಡಂತಿವೆ. (31.3.95)

| ವರ್ಗ | ತಯಾರಕರುಗಳ ಒಟ್ಟು ಸಂಖ್ಯೆ | | | ಉತ್ಪಾದನಾ ಲೈಸನ್ಸ್‌ಗಳ ಒಟ್ಟು ಸಂಖ್ಯೆ | | |
|---|---|---|---|---|---|---|
| | ಸ್ವಂತ | ಸಾಲ | ಒಟ್ಟು | ಸ್ವಂತ | ಸಾಲ | ಒಟ್ಟು |
| 1. ಅಲೋಪತಿ (ರೀಪ್ಯಾಕ್ ಅಥವಾ ಮರು ಕಟ್ಟುವಂತಹವೂ ಸೇರಿ) | 263 | 147 | 410 | 368 | 192 | 560 |
| 2. ಕಾಂತಿವರ್ಧಕಗಳು : ಪ್ರಸಾಧನಗಳು | 69 | 3 | 72 | 69 | 3 | 72 |
| 3. ರಕ್ತ ನಿಧಿಗಳು | 54 | - | 54 | 54 | - | 54 |
| 4. ಅನುಮೋದಿತ ಪ್ರಯೋಗ ಶಾಲೆಗಳು | 03 | - | 03 | 03 | - | 03 |
| ಒಟ್ಟು | 389 | 150 | 539 | 494 | 195 | 689 |

1-4-94 ರಿಂದ 31-3-95ರ ಅವಧಿಯಲ್ಲಿ 373 ಔಷಧ ಉತ್ಪಾದನಾ ಘಟಕಗಳನ್ನು 13.564 ಮಾರಾಟ ಆವರಣಗಳನ್ನು ಮತ್ತು 114 ಆಸ್ಪತ್ರೆಗಳನ್ನೂ ಪರಿವೀಕ್ಷಿಸಲಾಯಿತು.

**ಔಷಧ ಮಾರಾಟ ಆವರಣಗಳು :-**

1994-95ನೇ ಸಾಲಿನ ಮಾರ್ಚ್ 31ರಂದು ಇದ್ದ ಔಷಧ ಮಾರಾಟ ಆವರಣಗಳ ಒಟ್ಟು ಸಂಖ್ಯೆ 10987.

ಟಿಪ್ಪಣಿ : 1-4-94 ರಿಂದ 31-3-95ರ ವರೆಗೆ. ಅಂಗಡಿಗಳನ್ನು ಮುಚ್ಚಿದ ಕಾರಣ. ಸಂಘಟನೆ ಬದಲಾವಣೆ. ಸಂಸ್ಥೆಯ ಬದಲಾವಣೆ. ಪರವಾನಗಿ ನವೀಕರಣ ಮಾಡದ ಕಾರಣ. 722 ಮಾರಾಟ ಸಂಸ್ಥೆಗಳ ಪರವಾನಗಿಗಳನ್ನು ರದ್ದುಗೊಳಿಸಲಾಗಿದೆ.

### ಅತ್ಯಾವಶ್ಯಕ ಔಷಧಗಳ ಪೂರೈಕೆಯ ಮೇಲ್ವಿಚಾರಣೆ :

ಉತ್ಪಾದಕರುಗಳು ಹಾಗೂ ಸಂಬಂಧಪಟ್ಟ ಔಷಧ ನಿಯಂತ್ರಣಾಧಿಕಾರಿಗಳನ್ನು ನೇರವಾಗಿ ಸಂಪರ್ಕಿಸುವ ಮೂಲಕ ಜೀವ ರಕ್ಷಿಸುವ ಅತ್ಯಾವಶ್ಯಕ ಔಷಧಗಳ ಲಭ್ಯತೆಗಳನ್ನು ಖಚಿತಪಡಿಸಿ ಕೊಳ್ಳಲಾಗುವುದು.

### 2. ಔಷಧ ಪರೀಕ್ಷಾ ಪ್ರಯೋಗ್ಶಾಲಯ :

ಕರ್ನಾಟಕ ರಾಜ್ಯ ಔಷಧ ನಿಯಂತ್ರಣ ಇಲಾಖೆಯ ಆಡಳಿತ ಹತೋಟಿಗೆ ಒಳಪಟ್ಟಿರುವ ಒಂದು ಸುಸಜ್ಜಿತ ಔಷಧ ಪರೀಕ್ಷಾ ಪ್ರಯೋಗಾಲಯವು ಕೆಲಸ ಮಾಡುತ್ತಿದೆ. ಇದನ್ನು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಾರಂಭಿಸಲಾಯಿತು.

ಈ ಪ್ರಯೋಗ ಶಾಲೆಯು ವ್ಯಾಕ್ಸಿನ್, ಸೀರಾ ಮತ್ತು ರಕ್ತವನ್ನು ಹೊರತುಪಡಿಸಿ ಎಲ್ಲಾ ವಿಧವಾದ ಔಷಧಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಹೊಂದಿದೆ. ಈ ಔಷಧ ಪ್ರಯೋಗಾಲದ ಮುಖ್ಯ ಕಾರ್ಯ ಚಟುವಟಿಕೆಗಳು ಈ ಕೆಳಕಂಡಂತಿವೆ.

1. ಔಷಧಗಳ ಸಂಯೋಜನೆಯ ಗುಣಮಟ್ಟ, ಪರಿಶುದ್ಧತೆ ಮತ್ತು ಶಕ್ತಿ ತಿಳಿಯುವ ಉದ್ದೇಶಕ್ಕಾಗಿ ಔಷಧ ಪರಿವೀಕ್ಷಕರು ಕಳುಹಿಸಿದ ಔಷಧ ಮತ್ತು ಕಾಂತಿ ವರ್ಧಕಗಳ ಮಾದರಿಗಳನ್ನು ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ನಿಗಧಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

2. ಒರಿಸ್ಸಾ, ದೆಹಲಿ. ಪಾಂಡಿಚೇರಿ, ಕೇರಳ ರಾಜ್ಯಗಳ ಔಷಧ ಪರಿವೀಕ್ಷಕರು ಹಾಗೂ ಮದ್ರಾಸಿನ ಕೇಂದ್ರಿಯ ಔಷಧ ಮಳಿಗೆಗಳು ಕಳುಹಿಸುವ ಕಾನೂನು ಬದ್ಧ ಮಾದರಿಗಳನ್ನು ಸಹಾ ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ಈ ಬಗ್ಗೆ ನಿಗಧಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಇಬ್ಬರು ಅಧೀಕ್ಷಕರಿದ್ದು, ಇವರು ಪ್ರಯೋಗಾಲಯಗಳ ಮೇಲುಸ್ತುವಾರಿ ಹೊಂದಿದವರಾಗಿದ್ದಾರೆ. ಇವರೊಂದಿಗೆ ಇಬ್ಬರು ಹಿರಿಯ ರಸಾಯನಜ್ಞರು, ಒಬ್ಬ ಜೀವ ರಸಾಯನಜ್ಞರು, ಒಬ್ಬ ಔಷಧ ವಿಜ್ಞಾನಿ, ಒಬ್ಬ ಔಷಧ ಸಂಜ್ಞಾನಿ ಹಾಗೂ ಒಬ್ಬ ಜೀವಾಣು ಶಾಸ್ತ್ರಜ್ಞರಿದ್ದಾರೆ.

ಹಿರಿಯ ರಸಾಯನಜ್ಞ, ಜೀವ ರಸಾಯನಜ್ಞ, ಔಷಧ ವಿಜ್ಞಾನಿ ಮತ್ತು ಔಷಧ ಸಂಜ್ಞಾನಿ ಇವರುಗಳನ್ನು ಸರ್ಕಾರದ ವಿಶ್ಲೇಷಕರನ್ನಾಗಿ ಅಧಿಸೂಚಿಸಲಾಗಿದೆ. ಇವರುಗಳು ಲಸಿಕೆಗಳು ಹಾಗೂ ಸೀರಾಗಳನ್ನು ಹೊರತು ಪಡಿಸಿ, ಎಲ್ಲಾ ವಿವಿಧ ಔಷಧಗಳು ಹಾಗೂ ಪ್ರಸಾಧನಗಳ ವಿಶ್ಲೇಷಕರಾಗಿದ್ದು, ಈ ಮೇಲೆ ಹೇಳಿರುವ ಎಲ್ಲಾ ರಾಜ್ಯಗಳ ಔಷಧ ವಿಶ್ಲೇಷಕರಾಗಿ ನಿಯುಕ್ತರಾಗಿದ್ದಾರೆ.

ಔಷಧ ಪ್ರಯೋಗಶಾಲೆಯು ಸಧ್ಯಕ್ಕೆ ಕೆಳಕಂಡ ವಿಭಾಗಗಳನ್ನು ಹೊಂದಿದೆ. :

1. ಔಷಧ ಮತ್ತು ರಸಾಯನ ಶಾಸ್ತ್ರ (Pharmaceutical Chemistry)
2. ಸೂಕ್ಷ್ಮ ಜೀವಾಣು ವಿಜ್ಞಾನ (Microbiology)
3. ಔಷಧ ವಿಜ್ಞಾನ (Pharmacology)
4. ಔಷಧ ಸಂಜ್ಞಾನ (Pharmacognosy)
5. ಜೀವಾಣು ವಿಜ್ಞಾನ (Bacteriology)

ಒಂದು ಪರಿಪೂರ್ಣ ಪ್ರಾಣಿಶಾಲೆ ಸಹ ಈ ಔಷಧ ಪರೀಕ್ಷಾ ಪ್ರಯೋಗಶಾಲೆಯಲ್ಲಿದೆ. ಇದರ ಹೊಣೆಗಾರಿಕೆ ಪಶುಸಂಗೋಪನಾ ಇಲಾಖೆಯಿಂದ ನಿಯೋಜಿತರಾದ ಪಶುವೈದ್ಯರಿಗೆ ಸೇರಿದೆ.

**ಈ ಪ್ರಯೋಗಶಾಲೆಯಲ್ಲಿ ವಿಶ್ಲೇಷಣೆಗೆ ಬಂದ ಮಾದರಿಗಳ ವಿವರ ಕೆಳಕಂಡಂತಿದೆ.**

1994 ಏಪ್ರಿಲ್ 1 ರಿಂದ 1995 ಮಾರ್ಚ್ ಕಡೆಯವರೆಗೆ ಸ್ವೀಕರಿಸಿದ ಮಾದರಿಗಳು.

| | | | |
|---|---|---|---|
| 1. | ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಕಾನೂನು ಬದ್ಧ ಮಾದರಿಗಳು | - | 1557 |
| | ಮುಂದುವರಿಸಲಾದ ಹಿಂದಿನ ವರ್ಷಗಳಲ್ಲಿ ಉಳಿದಿದ್ದ ಮಾದರಿಗಳು. | - | 1827 |
| | ಒಟ್ಟು : | - | 3384 |
| 2. | ಸರ್ಕಾರಿ ಆಸ್ಪತ್ರೆಗಳು ಮತ್ತು ಸರ್ಕಾರಿ ಔಷಧ ಮಳಿಗೆಗಳು ಮತ್ತು ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಅನೌಪಚಾರಿಕ ಮಾದರಿಗಳು. | - | - |

**1.4.94 ರಿಂದ 31.3.95ರ ವರೆಗೆ ವಿಶ್ಲೇಷಿಸಲಾದ ಮಾದರಿಗಳು :**

| | | | |
|---|---|---|---|
| 1. | ಒಟ್ಟು ವಿಶ್ಲೇಷಿಸಲಾದ ಮಾದರಿಗಳು | - | 2436 |
| 2. | ಉತ್ತಮ ಗುಣಮಟ್ಟವಿರುವುದಾಗಿ ಕಂಡು ಬಂದಿರುವ ಮಾದರಿಗಳು | - | 2227 |
| 3. | ಉತ್ತಮ ಗುಣಮಟ್ಟದಲ್ಲವೆಂದು ಕಂಡು ಬಂದಿರುವ ಮಾದರಿಗಳು | - | 207 |
| 4. | ಭಾಗಶಃ ವಿಶ್ಲೇಷಿಸಲಾದ ಮಾದರಿಗಳು | - | 2 |

## ಗ್ರಂಥಾಲಯ

ಔಷಧ ಪರಿವೀಕ್ಷಣಾ ಪ್ರಯೋಗಾಲಯವು ಸುವ್ಯವಸ್ಥಿತ ಗ್ರಂಥಾಲಯವನ್ನು ಹೊಂದಿದ್ದು ಇದರಲ್ಲಿ ಎಲ್ಲಾ ಬಗೆಯ ಆಕರ ಗ್ರಂಥಗಳೂ ಹಾಗೂ ರಸಾಯನಿಕ ಸಂಗ್ರಹಗಳೂ ಲಭ್ಯವಿದೆ. ಸಿಬ್ಬಂದಿವರ್ಗಕ್ಕೆ ಪ್ರಪಂಚದಲ್ಲಿ ಔಷಧ ತಯಾರಿಕಾ ವಿಜ್ಞಾನದಲ್ಲಿ ಆಗುತ್ತಿರುವ ಇತ್ತೀಚಿನ ಬೆಳವಣಿಗೆ ಮತ್ತು ಸಂಶೋಧನೆಗಳ ಬಗ್ಗೆ ಕಾಲೋಚಿತ ಮಾಹಿತಿಯನ್ನು ಒದಗಿಸುವ ಸಲುವಾಗಿ ಹಲವಾರು ಭಾರತೀಯ ಹಾಗೂ ವಿದೇಶಿ ನಿಯತಕಾಲಿಕ ಪತ್ರಿಕೆಗಳನ್ನು ತರಿಸಲಾಗುತ್ತಿದೆ. ಈ ಗ್ರಂಥಾಲಯ ಸೌಲಭ್ಯವನ್ನು ನಮ್ಮ ರಾಜ್ಯದ ಔಷಧ ತಯಾರಕರಿಗೂ, ಔಷಧ ವಿಜ್ಞಾನ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೂ ಮತ್ತು ಔಷಧ ವಿಜ್ಞಾನದ ಬಗ್ಗೆ ಸಂಶೋಧನೆ ನಡೆಸುತ್ತಿರುವ ಅಭ್ಯರ್ಥಿಗಳಿಗೂ ವಿಸ್ತರಿಸಲಾಗಿದೆ. ಅರ್ಹ ಗ್ರಂಥ ಪಾಲಕರನ್ನು ಈ ಗ್ರಂಥಾಲಯ ಹೊಂದಿದೆ.

### 3. ಫಾರ್ಮಸಿ ಶಿಕ್ಷಣ

ಫಾರ್ಮಸಿ ಶಿಕ್ಷಣಕ್ಕೆ ಸಂಬಂಧಿಸಿದಂತೆ. ಎರಡು ಪ್ರಮುಖ ಅಂಗಗಳಿವೆ. ಅವುಗಳೆಂದರೆ :-

ಅ) ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ. ಬೆಂಗಳೂರು.

ಆ) ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು.

ಅ) ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ. ಬೆಂಗಳೂರು :-

ಔಷಧ ನಿಯಂತ್ರಣ ಇಲಾಖೆಯ ಆಡಳಿತದ ಹತೋಟಿಯಲ್ಲಿ ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ (ಸರ್ಕಾರಿ ಫಾರ್ಮಸಿ ಕಾಲೇಜು) 1964ರಿಂದ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಇಲ್ಲಿ ಡಿಪ್ಲೊಮಾ. ಪದವಿ ಹಾಗೂ ಸ್ನಾತಕೋತ್ತರ ಮಟ್ಟದವರೆಗೆ ಶಿಕ್ಷಣ ಪಡೆಯಲು ಸಕಲ ಸೌಲಭ್ಯಗಳಿವೆ. ಈ ಸಂಸ್ಥೆಯಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗವನ್ನು ನಾಲ್ಕು ವಿಜ್ಞಾನ ವಿಭಾಗಗಳಲ್ಲಿ ಅಂದರೆ ಔಷಧ ಮತ್ತು ತಂತ್ರಜ್ಞಾನ (Pharmaceutical Technology) ಔಷಧ ಶಾಸ್ತ್ರ (Pharmacology), ಔಷಧ ಸಂಜ್ಞಾನ (Pharmacognosy) ಮತ್ತು ಔಷಧ ರಸಾಯನ ಶಾಸ್ತ್ರ (pharmaceutical Chemistry) ಗಳಲ್ಲಿ ನಡೆಸಲು ಭಾರತ ಸರ್ಕಾರ ಶೇಕಡಾ 100 ಭಾಗ ಅನುದಾನ ನೀಡುತ್ತಿದೆ. ಇದರಂತೆ ಪ್ರತಿಯೊಂದು ವಿಭಾಗದಲ್ಲೂ 6 ವಿದ್ಯಾರ್ಥಿಗಳಿಗೆ ಶಿಕ್ಷಣ ನೀ ಡಲಾಗುತ್ತಿದೆ.

ಈ ಮಹಾ ವಿದ್ಯಾಲಯದಲ್ಲಿ ಒಬ್ಬ ಪ್ರಾಂಶುಪಾಲರು. 6 ಪ್ರಾಧ್ಯಾಪಕರೂ. 9 ಸಹಾಯಕ ಪ್ರಾಧ್ಯಾಪಕರೂ ಹಾಗೂ 14 ಭೋದಕರ ಹುದ್ದೆಗಳು ಮಂಜೂರಾತಿಯಾಗಿದೆ.

ಈ ವರ್ಷ ಬೆಂಗಳೂರು ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯದಿಂದ ಬೆಂಗಳೂರು ವಿಶ್ವವಿದ್ಯಾನಿಲಯ ನಡೆಸುತ್ತಿರುವ ಪದವಿ ಪರೀಕ್ಷೆಗೆ ಕುಳಿತಿದ್ದ 49 ಜನ ವಿದ್ಯಾರ್ಥಿಗಳಲ್ಲಿ 31 ಜನರೂ ಮತ್ತು ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ 29 ಜನ ವಿದ್ಯಾರ್ಥಿಗಳಲ್ಲಿ 27 ಜನರೂ ತೇರ್ಗಡೆಯಾಗಿದ್ದಾರೆ.

## ೩) ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು.

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ಭಾರತದ ಫಾರ್ಮಸಿ ಪರಿಷತ್ತು ರೂಪಿಸಿರುವ ಶಿಕ್ಷಣ ನಿಯಮಗಳನ್ನು ಜಾರಿಗೆ ತರುವುದರ ಸಲುವಾಗಿ ಒಂದು ಪರೀಕ್ಷಾ ಪ್ರಾಧಿಕಾರ ಮಂಡಳಿಯನ್ನು ರಚಿಸಿದೆ. ಈ ಮಂಡಳಿಗೆ ಸರ್ಕಾರಿ ಫಾರ್ಮಸಿ ಕಾಲೇಜಿನ ಪ್ರಾಂಶುಪಾಲರು ಛೇರ್‌ಮನ್ ರಾಗಿದ್ದು, ಒಬ್ಬ ಸದಸ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ನಿರ್ವಹಿಸಲಾಗುತ್ತಿದೆ.

ಈ ಮಂಡಳಿಯು ಡಿಪ್ಲೊಮಾ ಮಟ್ಟದ ಫಾರ್ಮಸಿ ಪರೀಕ್ಷೆಗಳನ್ನು ನಡೆಸುತ್ತಿದೆ. ಈ ವರ್ಷ ವಿದ್ಯಾ ಸಂಸ್ಥೆಗಳಿಂದ ಒಟ್ಟು 10,457 ವಿದ್ಯಾರ್ಥಿಗಳು ಪೂರ್ವಾಭಾವಿ ಡಿಪ್ಲೊಮಾ ಪರೀಕ್ಷೆಗೆ ಕುಳಿತಿದ್ದು ಅದರಲ್ಲಿ 2869 ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ. ಅಂತಿಮ ಪರೀಕ್ಷೆಯಲ್ಲಿ ಒಟ್ಟು 7792 ವಿದ್ಯಾರ್ಥಿಗಳು ಕುಳಿತಿದ್ದು 2443 ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದಾರೆ.

## – ಹಣಕಾಸು –

### 1994–95 ನೇ ಸಾಲಿನ ಆಯವ್ಯಯ

ವ್ಯಯ

| ಕ್ರಮ ಸಂಖ್ಯೆ | ಆಯವ್ಯಯ ಶೀರ್ಷಿಕೆ | ಹಂಚಿಕೆ 1994-95ಕ್ಕೆ (ಲಕ್ಷ ರೂಗಳಲ್ಲಿ) | | ವ್ಯಯ 1994-95ಕ್ಕೆ (ಲಕ್ಷರೂಗಳಲ್ಲಿ) | |
|---|---|---|---|---|---|
| | | ಯೋಜನೆ | ಯೋಜನೇತರ | ಯೋಜನೆ | ಯೋಜನೇತರ |
| 1. | 2210-06-104-0-01 ಔಷಧ ನಿಯಂತ್ರಕರು | 31.00 | 127.19 | 15.54 | 103.90 |
| 2. | 2210-06-104-0-02 ಔಷಧ ಪರೀಕ್ಷಾ ಪ್ರಯೋಗಾಲಯ | 8.00 | 66.87 | 4.00 | 55.03 |
| 3. | 2210-05-105-1-14 ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ | 6.00 | 80.11 | 3,00 | 64.11 |
| 4. | 2210-05-105-1-15 ಕೇಂದ್ರ ಪುರಸ್ಕೃತ ಯೋಜನೆ | 20.00 | 11.18 | 5.60 | 11.18 |
| | ಒಟ್ಟು | 65,00 | 285.35 | 28.14 | 234.22 |

7674- F - 9

| ಕ್ರಮ ಸಂಖ್ಯೆ | ಆಯವ್ಯಯ ಲೆಕ್ಕ ಶೀರ್ಷಿಕೆ | ಲಕ್ಷರೂ.ಗಳಲ್ಲಿ |
|---|---|---|
| 1. | 0210-04-104-02<br>ಔಷಧ ನಿಯಂತ್ರಕರು | 9.00 |
| 2. | 0210-03-105-01<br>ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಮತ್ತು ಪರೀಕ್ಷಾ ಪಾದ್ರಿಕಾರ ಮಂಡಳಿ, | |
| | ಒಟ್ಟು | 47,00 |

ಔಷಧ ನಿಯಂತ್ರಕರು

## ಔಷಧ ನಿಯಂತ್ರಣ ಇಲಾಖೆಗೆ ಸಂಬಂಧಪಟ್ಟ ಸಂಕ್ಷಿಪ್ತ ಅಂಕಿ ಅಂಶಗಳು

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 90-91 | 91-92 | 92-93 | 93-94 | 94-95 |
|---|---|---|---|---|---|---|
| | **ಆಡಳಿತ ಮತ್ತು ಅಮಲು ಜಾರಿ :** | | | | | |
| | **ಔಷಧ ತಯಾರಿಕಾ ಘಟಕಗಳು** | | | | | |
| ಅ) | 1. ಅಲೋಪತಿ ಔಷಧಗಳು (ರೀಪ್ಯಾಕಿಂಗ್ ಸೇರಿ) | 384 | 428 | 450 | 4450 | 467 |
| | 2. ಕಾಂತಿ ವರ್ಧಕಗಳು ಪ್ರಸಾಧನಗಳು | 71 | 74 | 82 | 86 | 72 |
| | ಒಟ್ಟು ಔಷಧ ತಯಾರಿಕಾ ಘಟಕಗಳು | 455 | 502 | 532 | 536 | 539 |
| ಆ) | ಔಷಧ ತಯಾರಿಕಾ ಪರವಾನುಗಳು | 581 | 646 | 695 | 698 | 689 |
| | ಒಟ್ಟು ಔಷಧ ಮಾರಾಟ ಆವರಣಗಳು | 9256 | 10591 | 9685 | 9875 | 10987 |

| | | | | | |
|---|---|---|---|---|---|
| ಪರಿವೀಕ್ಷಣೆಗಳು | | | | | |
| ಅ) ಮಾರಾಟ ಆವರಣಗಳು | 13380 | 13015 | 12253 | 15494 | 13564 |
| ಆ) ತಯಾರಿಕಾ ಘಟಕಗಳು | 402 | 350 | 321 | 572 | 373 |
| ಇ) ಆಸ್ಪತ್ರೆಗಳು | 121 | 97 | 82 | 103 | 114 |
| ಪರವಾನಗಿಗಳು : | | | | | |
| ಅ) ಮಾರಾಟ ಪರವಾನಗಿಗಳ ಮಂಜೂರು | 2664 | 2501 | 1828 | 1837 | 1834 |
| ಆ) ಮಾರಾಟ ಪರವಾನಗಿಗಳ ನವೀಕರಣ | 2974 | 3844 | 2786 | 5004 | 4745 |
| ಇ) ತಯಾರಿಕಾ ಪರವಾನಗಿಗಳ ಮಂಜೂರು | 151 | 90 | 90 | 107 | 125 |
| ಈ) ತಯಾರಿಕಾ ಪರವಾನಗಿಗಳ ನವೀಕರಣ | 136 | 104 | 140 | 307 | 269 |
| ಉ) ಪತ್ತೆ ಹಚ್ಚಲಾದ ಪರವಾನಗಿರಹಿತ ಮಾರಾಟಗಾರರ ಪ್ರಕರಣಗಳು | 46 | 37 | 31 | 34 | 10 |
| ಊ) ರದ್ದು ಪಡಿಸುವಿಕೆ ಃ ಅ ಮಾನ್ಯತೆಗೊಳಿಸುವಿಕೆ. | 1037 | 673 | 2767 | 1647 | 722 |
| ಋ) ಅಮಾನತ್ತುಗಳು | 131 | 229 | 187 | 321 | 171 |
| ಕಾನೂನು ವ್ಯವಹರಣೆಗಳು | | | | | |
| ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು | | | | | |
| ಅ) ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 | 96 | 112 | 120 | 97 | 97 |
| ಆ) ಔಷಧ (ಬೆಲೆ ನಿಯಂತ್ರಣ) ಆದೇಶ 1979 : 1987 | 40 | 40 | 39 | 36 | 36 |
| ವರ್ಷದಲ್ಲಿ ಹೂಡಲಾದ ಕಾನೂನು ವ್ಯವಹರಣೆಗಳು | | | | | |
| ಅ) ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 17 | 11 | 16 | 21 | 26 |
| ಆ) ಔಷಧ (ಬೆಲೆ ನಿಯಂತ್ರಣ) ಆದೇಶ 1979 : 1987 | - | 1 | 1 | 4 | 2 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 90-91 | 91-92 | 92-93 | 93-94 | 94-95 |
|---|---|---|---|---|---|---|
| ಇತ್ಯರ್ಥವಾದ ಕಾನೂನು ವ್ಯವಹರಣೆಗಳು | | | | | | |
| ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 1 | 3 | 39 | 12 | 8 |
| ಆ) | ಔಷಧ (ಬೆಲೆ ನಿಯಂತ್ರಣ) ಆದೇಶ 1979 : 1987 | - | 1 | 4 | 4 | 2 |
| ನಿರ್ದೋಷಿಯೆಂದು ತೀರ್ಮಾನವಾದ : ಬಿಡುಗಡೆ ಮಾಡಲಾದ ಮೊಕದ್ದಮೆಗಳು | | | | | | |
| ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 1 | 2 | 22 | 9 | 6 |
| ಆ) | ಔಷಧ (ಬೆಲೆ ನಿಯಂತ್ರಣ) ಆದೇಶ 1979 : 1987 | - | 1 | 4 | 2 | 1 |
| ದೋಷಸಿದ್ಧ ಮೊಕದ್ಧಮೆಗಳು : | | | | | | |
| ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | - | 1 | 17 | 3 | 2 |
| ಆ) | ಔಷಧ (ಬೆಲೆ ನಿಯಂತ್ರಣ) ಆದೇಶ 1979 : 1987 | - | 1 | - | 2 | 1 |

## ಆ . ಔಷಧ ಪರೀಕ್ಷಾ ಪ್ರಯೋಗಾಲಯ

| | | | | | | |
|---|---|---|---|---|---|---|
| ಅ) | ವರ್ಷದ ಪ್ರಾರಂಭದಲ್ಲಿ ಉಳಿದಿದ್ದ ಔಷಧ ಮಾದರಿಗಳ ಸಂಖ್ಯೆ | 828 | 528 | 693 | 1128 | 1827 |
| ಆ) | ವರ್ಷದಲ್ಲಿ ವಿಶ್ಲೇಷಣೆಗೆ ಬಂದ ಮಾದರಿಗಳ ಸಂಖ್ಯೆ | 2521 | 2986 | 2921 | 3619 | 1557 |
| ಇ) | ಒಟ್ಟು ವಿಶ್ಲೇಷಿಸಿದ ಮಾದರಿಗಳು | 2649 | 2817 | 2484 | 2777 | 2436 |
| ಈ) | ಉತ್ತಮ ಗುಣಮಟ್ಟವಿರುವುದಾಗಿ ಕಂಡು ಬಂದಿರುವ ಮಾದರಿಗಳು | 2264 | 2558 | 2251 | 2600 | 2227 |
| ಉ) | ಉತ್ತಮ ಗುಣಮಟ್ಟದ್ದಲ್ಲವೆಂದು ಕಂಡು ಬಂದಿರುವ ಮಾದರಿಗಳು : | | | | | 207 |
| 1. | ಕರ್ನಾಟಕ ರಾಜ್ಯ | | | | | 44 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 90-91 | 91-92 | 92-93 | 93-94 | 94-95 |
|---|---|---|---|---|---|---|
| 2. | ಇತರೆ ರಾಜ್ಯಗಳು | | | | | 163 |
| | ಒಟ್ಟು | 210 | 199 | 198 | 174 | 207 |
| ಊ) | ಭಾಗಶಃ ವಿಶ್ಲೇಷಿಸಿದ ಮಾದರಿಗಳು | 175 | 60 | 35 | 3 | 2 |
| ಋ) | ವರ್ಷದ ಕೊನೆಯಲ್ಲಿ ವಿಶ್ಲೇಷಣೆಗೆ ಉಳಿದಿರುವ ಮಾದರಿಗಳು | 528 | 693 | 1128 (4 ತಿರಸ್ಕೃತ) | 1827 (2ತಿರಸ್ಕೃತ) | 909 (143 ತಿರಸ್ಕೃತ) 39 |

## ೯. ಫಾರ್ಮಸಿ ಶಿಕ್ಷಣ

**ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ**

| | | 90-91 | 91-92 | 92-93 | 93-94 | 94-95 |
|---|---|---|---|---|---|---|
| **ಸ್ನಾತಕೋತ್ತರ ಫಾರ್ಮಸಿ** | | | | | | |
| ಅ) | ಅಂತಿಮ ವರ್ಷದಲ್ಲಿ ಸ್ನಾತಕೋತ್ತರ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 24 | 24 | 22 | 22 | 29 |
| ಆ) | ಅಂತಿಮ ವರ್ಷದಲ್ಲಿ ಸ್ನಾತಕೋತ್ತರ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 23 | 24 | 22 | 22 | 27 |
| **ಪದವಿ ಫಾರ್ಮಸಿ** | | | | | | |
| ಅ) | ಅಂತಿಮ ವರ್ಷದಲ್ಲಿ ಪದವಿ ಫಾರ್ಮಸಿ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 41 | 40 | 36 | 54 | 49 |
| ಆ) | ಅಂತಿಮ ವರ್ಷದಲ್ಲಿ ಪದವಿ ಫಾರ್ಮಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 27 | 26 | 20 | 26 | 31 |
| **ಡಿಪ್ಲೊಮೊ ಮಟ್ಟದ ಫಾರ್ಮಸಿ ಶಿಕ್ಷಣ** | | | | | | |
| ಅ) | ಅಂತಿಮ ಡಿ. ಫಾರ್ಮ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 78 | 96 | 68 | 85 | 75 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 90-91 | 91-92 | 92-93 | 93-94 | 94-95 |
|---|---|---|---|---|---|---|
| ಆ) | ಅಂತಿಮ ಡಿ. ಫಾರ್ಮ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 27 | 38 | 38 | 38 | 43 |
| | **ಪರೀಕ್ಷಾ ಪ್ರಾಧಿಕಾರ ಮಂಡಳಿ** | | | | | |
| ಅ) | ಪೂರ್ವಭಾವಿ ಡಿ. ಫಾರ್ಮ ಪರೀಕ್ಷೆಗೆ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 11280 | 13607 | 14442 | 9620 | 10457 |
| ಆ) | ಪೂರ್ವಭಾವಿ ಡಿ. ಫಾರ್ಮ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 2571 | 2959 | 3542 | 1737 | 2869 |
| ಇ) | ಅಂತಿಮ ಡಿ. ಫಾರ್ಮ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 887 | 9476 | 10094 | 8128 | 7792 |
| ಈ) | ಅಂತಿಮ ಡಿ. ಫಾರ್ಮ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 2092 | 1591 | 2425 | 2111 | 2443 |

# ಜನಸಂಖ್ಯಾ ಕೇಂದ್ರ, ಬೆಂಗಳೂರು
# 1994-95ನೇ ವರ್ಷದ ವಾರ್ಷಿಕ ವರದಿ

## 1. ಪರಿಚಯ

ಜನಸಂಖ್ಯಾ ಕೇಂದ್ರದ ಮುಖ್ಯ ಧ್ಯೇಯವು ಕರ್ನಾಟಕ ಸರ್ಕಾರಕ್ಕೆ ಸಹಕರಿಸಿ ಮುಖ್ಯವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ವಿವಿಧ ಆರೋಗ್ಯ ಮತ್ತು ಕುಟುಂಬ ಯೋಜನಾ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿಯೂ ಮತ್ತು ಹೆಚ್ಚು ಕುಶಲತೆಯಿಂದಲೂ ಅನುಷ್ಠಾನಗೊಳ್ಳಲು ನೆರವಾಗುವುದು ಮತ್ತು ತತ್ಸಂಬಂಧವಾದ ನಾನಾ ರೀತಿಯ ಸಂಶೋಧನಾ ಮತ್ತು ಮೌಲ್ಯಮಾಪನ ಅಧ್ಯಯನಗಳನ್ನು ಕೈಗೊಂಡು, ನಾನಾ ರೀತಿಯ ಸಿಬ್ಬಂದಿ ವರ್ಗದವರಿಗೂ ಮತ್ತು ಅಧಿಕಾರಿಗಳಿಗೂ ಸೇವಾನಿರತ ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದಾಗಿದೆ.

## 2. ಆಡಳಿತ

ಡಾ । ಪಿ.. ಹೆಚ್. ರೆಡ್ಡಿ. ಕೇಂದ್ರದ ನಿರ್ದೇಶಕರು ತಾ॥ 31.3.1994ರಲ್ಲಿ ನಿವೃತ್ತರಾಗಿ ತಾ ॥ 21.4.1994ರವರೆವಿಗೆ 1ವರ್ಷ ಕಾಲ ಒಪ್ಪಂದದ ಮೇರೆಗೆ ನಿರ್ದೇಶಕರಾಗಿ ಮುಂದುವರೆದರು. ಈ ವರದಿಯ ಕಾಲಾವಧಿಯಲ್ಲಿ ಶ್ರೀಮತಿ ಸುಮಿತ್ರ ಕೆ. ಫೋತ್ನಿಸ್ ಮತ್ತು ಶ್ರೀ ವಿ. ಅಶೋಕನ್‌ರವರು ಸಂಶೋಧನಾಧಿಕಾರಿಯ ಹುದ್ದೆಗೆ ಬಡ್ತಿ ಹೊಂದಿದರು.

31.3.1995 (ಯೋಜನೇತರ) ರಲ್ಲಿದ್ದಂತೆ ಸಂಸ್ಥೆಯ ಸ್ವರೂಪ ಮತ್ತು ಸಿಬ್ಬಂದಿ ಸ್ಥಾನಗಳು

| ಕ್ರಮ ಸಂಖ್ಯೆ | ಪದನಾಮ | ಒಟ್ಟು ಮಂಜೂರಾದ ಹುದ್ದೆಗಳು | ಒಟ್ಟು ಭರ್ತಿಯಾದ ಹುದ್ದೆಗಳು | ಗಂಡು | ಹೆಣ್ಣು | ಪರಿಶಿಷ್ಟ ಜಾತಿ | ಪರಿಶಿಷ್ಟ ಬುಡಕಟ್ಟು |
|---|---|---|---|---|---|---|---|
| 1. | ನಿರ್ದೇಶಕರು | 1 | 1 | 1 | - | - | - |
| 2. | ಸಹಾಯಕ ನಿರ್ದೇಶಕರು | 4 | 3 | 2 | 1 | | - |
| 3. | ಸಂಶೋಧನಾಧಿಕಾರಿ | 7 | 4 | 3 | 1 | 1 | - |
| 4. | ಪೋಷಣಾಧಿಕಾರಿ | 1 | 1 | 1 | - | - | - |
| 5. | ಕಂಪ್ಯೂಟರ್ ಪ್ರೋಗ್ರಾಮರ್ | 1 | - | - | - | - | - |
| 6. | ಆಡಳಿತ ಮತ್ತು ಲೆಕ್ಕಾಧಿಕಾರಿ | 1 | - | - | - | - | |
| 7. | ಸಹಾಯಕ ಸಂಶೋಧನಾಧಿಕಾರಿ | 3 | - | - | - | - | - |
| 8. | ಸಂಶೋಧನಾ ಸಹಾಯಕರು | 18 | 11 | 5 | 6 | 2 | - |
| 9. | ಸಂಶೋಧನಾ ಕ್ಷೇತ್ರ ತನಿಖಾಕರ್ತರು | 4 | - | - | - | - | |
| 10. | ಅಂಕಿ ಅಂಶಗಳ ಸಹಾಯಕರು | 4 | - | - | - | - | - |
| 11. | ಗ್ರಂಥಪಾಲಕರು | 1 | - | - | - | - | |
| 12. | ಲೆಕ್ಕ ಪರಿಶೋಧಕರು | 1 | 1 | 1 | - | - | |
| 13. | ಮೇಲ್ವಿಚಾರಕರು | 1 | - | - | - | - | |
| 14. | ಪ್ರಥಮ ದರ್ಜೆ ಸಹಾಯಕರು | 2 | 2 | 2 | - | 1 | - |
| 15. | ಲೆಕ್ಕ ಸಹಾಯಕರು | 1 | 1 | 1 | - | 1 | - |
| 16. | ಶೀಘ್ರಲಿಪಿಗಾರರು | 2 | 1 | - | 1 | - | - |
| 17. | ದ್ವಿತೀಯ ದರ್ಜೆ ಸಹಾಯಕರು | 1 | 1 | 1 | - | - | - |
| 18. | ಬೆರಳಚ್ಚುಗಾರರು | 5 | 5 | 3 | 2 | - | - |
| 19. | ಚಾಲಕರು | 4 | 4 | 4 | - | 1 | - |
| 20 | 'ಡಿ' ವರ್ಗದವರು | 7 | 5 | 4 | 1 | 1 | 1 |
| | ಒಟ್ಟು | 69 | 40 | 28 | 12 | 7 | 1 |

## 31.3.1995ರಲ್ಲಿದ್ದಂತೆ ಸಿಬ್ಬಂದಿ ಸ್ಥಾನ

| ಹುದ್ದೆಗಳ ವರ್ಗ | ವರ್ಷಾಂತ್ಯದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|
| | | ಗಂಡಸರು | ಹೆಂಗಸರು | ಪರಿಶಿಷ್ಟ ಜಾತಿ | ಪರಿಶಿಷ್ಟ ಬುಡಕಟ್ಟು |
| ಎ | 15 | 7 | 2 | 1 | - |
| ಬಿ | 3 | - | - | - | - |
| ಸಿ | 44 | 17 | 9 | 5 | - |
| ಡಿ | 7 | 4 | 1 | 1 | 1 |
| ಒಟ್ಟು | 69 | 28 | 12 | 7 | 1 |

### 3. ಆರ್ಥಿಕ ವಿವರಗಳು

1994-95ರ ಆಯವ್ಯಯದ ಮಂಡನೆ ಮತ್ತು ವೆಚ್ಚ

ಲೆಕ್ಕ ಶೀರ್ಷಿಕೆ : ಯೋಜನೆ : "2211 ಕುಟುಂಬ ಯೋಜನೆ
108 ಐಪಿಪಿಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರದ ಕಾರ್ಯಕ್ರಮಗಳು
02 ಭಾರತ ಜನಸಂಖ್ಯಾ ಯೋಜನೆ - III"

ಯೋಜನೇತರ "2211 ಕುಟುಂಬ ಯೋಜನೆ
108 ಐಪಿಪಿಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರದ ಕಾರ್ಯಕ್ರಮಗಳು
01 ಭಾರತ ಜನಸಂಖ್ಯಾ ಯೋಜನೆ ಜನಸಂಖ್ಯಾ ಕೇಂದ್ರ"

| ಬಾಬ್ತುಗಳು | | ಆಯವ್ಯಯ ಹಂಚಿಕೆ 1994-95 ರೂ. | ವೆಚ್ಚ 1994-95 ರೂ. |
|---|---|---|---|
| | | ಯೋಜನೆ | |
| | | - | - |
| | | ಯೋಜನೇತರ ರೂ. | ರೂ |
| 1. | ಸಂಬಳಗಳು | 17.32.000-00 | 12.70.278-00 |
| 2. | ತುಟ್ಟಿ ಭತ್ಯೆ | 14.00.000-00 | 11.41.497-00 |
| 3. | ಇತರೆ ಭತ್ಯಗಳು | 4.69.000-00 | 2.43.400-00 |
| 4. | ಪ್ರವಾಸ ವೆಚ್ಚಗಳು | 30.000-00 | 28.902-00 |
| 5. | ಕಛೇರಿ ವೆಚ್ಚ | 2.00.000-00 | 1.81.387-00 |
| 6. | ವೈದ್ಯಕೀಯ ಶುಲ್ಕಗಳು | 15.000-00 | 16.261-00 |
| 7. | ಮೋಟಾರ್ ವಾಹನಗಳ ವೆಚ್ಚಗಳು | 60.000-00 | 43.731-00 |
| | ಒಟ್ಟು (ಯೋಜನೇತರ) | 39.06.000-00 | 29.25.456-00 |

## IV ಪೂರ್ಣಗೊಂಡ ಅಧ್ಯಯನಗಳು

### 1. ಕೊಡಗು ಜಿಲ್ಲೆಯಲ್ಲಿ ಜನಸಂಖ್ಯಾ ಬದಲಾವಣೆಯ ಅಧ್ಯಯನ

1981-91ರಲ್ಲಿ ಕರ್ನಾಟಕ ರಾಜ್ಯದ ಕೊಡಗು ಜಿಲ್ಲೆಯಲ್ಲಿ ತಗ್ಗಿದ ಜನಸಂಖ್ಯಾ ಬೆಳವಣಿಗೆಯ ಪ್ರಮಾಣವು ಶೇಕಡಾ 5.75ರಷ್ಟು ದಾಖಲೆಯಾಗಿ. ಲಿಂಗಪ್ರಮಾಣವು (1.000 ಗಂಡಸರಿಗೆ ಇರಬಹುದಾದ ಹೆಂಗಸರ ಪ್ರಮಾಣವು) 1981ರಲ್ಲಿ 933ರಿಂದ 1991ರಲ್ಲಿ 989 ರಷ್ಟು ಪ್ರಗತಿಯನ್ನು ತೋರಿಸಿದೆ. ಇಂತಹ ತಗ್ಗಿದ ಜನಸಂಖ್ಯಾ ಬೆಳವಣಿಗೆಯ ಪ್ರಮಾಣಕ್ಕೆ ಕಾರಣಗಳನ್ನರಿಯಲು ಬೆಂಗಳೂರಿನಲ್ಲಿರುವ ಜನಸಂಖ್ಯಾ ಕೇಂದ್ರವು ಕುಟುಂಬದ ಸಮೀಕ್ಷೆಯೊಂದನ್ನು ಕೊಡಗು ಜಿಲ್ಲೆಯಲ್ಲಿ ಕೈಗೊಂಡಿತು. ಈ ಸಮೀಕ್ಷೆಯನ್ನು ವಲಸೆ ಹೋಗುವಿಕೆಯ ಪ್ರಮಾಣವನ್ನು ಅಂದಾಜಿಸಿ. ಫಲವತ್ತತೆ ಮತ್ತು ಮರಣದ ಬಗ್ಗೆ ಇರುವ ಮಟ್ಟವನ್ನರಿಯಲು ಮತ್ತು ಕುಟುಂಬ ಯೋಜನಾ ವಿಧಾನಗಳಿಂದ ಸಂರಕ್ಷಿಸಲ್ಪಟ್ಟ ದಂಪತಿಗಳ ಪ್ರಮಾಣವನ್ನು ಅಂದಾಜಿಸಲು ರೂಪಿಸಲಾಗಿದೆ. ಜಿಲ್ಲೆಯಲ್ಲಿನ ನಗರ. ಗ್ರಾಮಾಂತರ ಹಾಗೂ ತೋಟಗಳ (ಪ್ಲಾಂಟೇಷನ್) ಪ್ರದೇಶಗಳಲ್ಲಿರುವ ಸುಮಾರು 3.000 ಕುಟುಂಬಗಳನ್ನು ಮಾದರಿಗಾಗಿ ಆಯ್ಕೆ ಮಾಡಲಾಗಿದೆ.

ಪ್ರತಿ 1.000 ಜನಸಂಖ್ಯೆಗೆ ಇರುವ ಕಚ್ಚಾ ಜನನದ ಹಾಗೂ ಮರಣದ ಪ್ರಮಾಣವು ಕ್ರಮವಾಗಿ 23.2 ಮತ್ತು 7.2 ಕಂಡು ಬಂದಿತು. 1981-91ರಲ್ಲಿ ವಲಸೆ ಬರುವವರ ಪ್ರಮಾಣವು ಶೇ. 4.69 ಹಾಗೂ ವಲಸೆ ಹೋಗುವವರ ಪ್ರಮಾಣವು ಶೇ. 14.69 ಇತ್ತು. ಹೀಗೆ ನಿವ್ವಳ ವಲಸೆಯು ಶೇ- 10.3 ಇತ್ತು. ಹೀಗೆ ಅಂದಾಜಿಸಿದ ಶೇ. 10.3ರಷ್ಟು ನಿವ್ವಳ ವಲಸೆಯಿಂದ. ದಶಕದ ಬೆಳವಣಿಗೆಯು 5.8 ರಷ್ಟಿದೆ. ಈ ಪ್ರಮಾಣವು ಜನಗಣತಿಯ ಅಂದಾಜಿನ 5.75 ಪ್ರಮಾಣಕ್ಕೆ ಬಹಳ ಹತ್ತಿರವಾಗಿದೆ. ಗಂಡಸರು ವಲಸೆಹೋಗುವುದರ ಮುಖ್ಯ ಕಾರಣವು ಉದ್ಯೋಗಕ್ಕೆ ಸಂಬಂಧಿಸಿದ್ದಾಗಿಯೂ ಮತ್ತು ಹೆಂಗಸರು ವಲಸೆ ಹೋಗುವಿಕೆಯು ಮದುವೆ ಕಾರಣದಿಂದಾಗಿಯೂ ಕಂಡು ಬಂದಿದೆ.

ಈ ಅಧ್ಯಯನವನ್ನಾಧರಿಸಿದ ಒಂದು ವರದಿಯು ತಯಾರಿದೆ. ಈ ಅಧ್ಯಯನದಲ್ಲಿ ಕಂಡು ಬಂದ ಅಂಶಗಳನ್ನು 1995ರಲ್ಲಿ ಮಾರ್ಚ್ ತಿಂಗಳಿನಲ್ಲಿ ನಡೆದ ಐ.ಎ.ಎಸ್. ಪಿ. ಸಮ್ಮೇಳನದಲ್ಲಿ ಮಂಡಿಸಲಾಯಿತು.

### 2. ಮಹಿಳೆಯರಲ್ಲಿ ಗರ್ಭಪಾತ ಮಾಡಿಸಿಕೊಳ್ಳುವ ವರ್ತನೆಗೆ ಸಂಬಂಧಿಸಿದಂತಹ ಮಾನಸಿಕ ಅಂಶಗಳು ಒಂದು ಅಧ್ಯಯನ

ಈ ಅಧ್ಯಯನವು ಮಹಿಳೆಯರಲ್ಲಿ ಗರ್ಭಪಾತವನ್ನಪೇಕ್ಷಿಸುವ ವರ್ತನೆಗೆ ಸಂಬಂಧಿಸಿದಂತಹ ಮಾನಸಿಕ ಅಂಶಗಳ ಬಗ್ಗೆ ಪರಿಶೀಲಿಸುತ್ತದೆ. ಬೆಂಗಳೂರಿನಲ್ಲಿರುವ ಸರ್ಕಾರೀ ಆಸ್ಪತ್ರೆಗಳಲ್ಲಿ ಸೇವೆ ಪಡೆದವರಲ್ಲಿ 92 ಮಂದಿ ಹಾಗೂ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಸೇವೆ ಪಡೆದ 68 ಮಂದಿ ಮಹಿಳೆಯರನ್ನು 1992ರ ಅಕ್ಟೋಬರ್‌ನಿಂದ 1993ರವರೆಗೆ ಗರ್ಭಪಾತ ಸೇವೆ ಪಡೆದವರ ಗುಂಪಿನಿಂದ ಮಾದರಿಗಾಗಿ ಆಯ್ಕೆ ಮಾಡಿ ಸಂದರ್ಶಿಸಲಾಗಿದೆ. ಗರ್ಭಪಾತ ಮಾಡಿಸಿಕೊಳ್ಳುವುದು ಕಾನೂನುಬದ್ಧವೆಂಬ ಅಂಶವನ್ನು ಶೇ. 65 ಮಂದಿ ಮಹಿಳೆಯರಿಗೆ ಅರಿವಿರಲಿಲ್ಲ. ಗರ್ಭಪಾತ ಮಾಡಿಸಿಕೊಳ್ಳಲು ತಿಳಿಸಿರುವ ಕಾರಣಗಳಲ್ಲಿ ಕೆಲವು ಮುಖ್ಯ ಕಾರಣಗಳು ಗರ್ಭ ನಿರೋಧಕಗಳನ್ನು ಬಳಸುವಾಗ ಅವುಗಳ ಫಲಕಾರಿಯಾಗದದು, ಕುಟುಂಬ ಕ್ಷೇಮವನ್ನು ನೋಡಿಕೊಳ್ಳುವ ವಿಚಾರದಲ್ಲಿ ಗಂಡಂದಿರ ಬೇಜವಾಬ್ದಾರಿತನ ಇವುಗಳು. ಸೇವೆ ಪಡೆದವರಲ್ಲಿ ಸುಮಾರು ಶೇ. 77 ಮಂದಿ ಮಹಿಳೆಯರು ತಮ್ಮ ಗಂಡಂದಿರ ಅನುಮತಿಯೊಂದಿಗೆ ನಿರ್ಧಾರವನ್ನು ಕೈಗೊಂಡರು. ಸೇವಾಕೇಂದ್ರಗಳು ಸಮೀಪದಲ್ಲಿರುವಿಕೆ ಮತ್ತು ಸೇವಾ ಸಿಬ್ಬಂದಿಗಳೊಂದಿಗೆ ಇರತಕ್ಕ ಪರಿಚಯಗಳು ನಿರ್ಧಿಷ್ಟವಾದ ಸೇವಾಕೇಂದ್ರವನ್ನು ಆಯ್ಕೆ ಮಾಡಿದ್ದಕ್ಕೆ ಕೆಲವು ಮುಖ್ಯ ಕಾರಣಗಳು. ಈ ಅಧ್ಯಯನವು ಪೂರ್ಣಗೊಂಡು. ತತ್ಸಂಬಂಧವಾದ ವರದಿಯು ತಯಾರಾಗಿದೆ.

### 3. ಕರ್ನಾಟಕದಲ್ಲಿ ನವವಿವಾಹಿತರಲ್ಲಿ ಕುಟುಂಬ ಯೋಜನಾ ವಿಧಾನಗಳ ಅನುಷ್ಠಾನದ ಬಗ್ಗೆ ಇರತಕ್ಕ ಜ್ಞಾನ ಮನೋಭಾವ ಮತ್ತು ಆಚರಣೆಯ ಬಗ್ಗೆ ಒಂದು ಅಧ್ಯಯನ

ನವವಿವಾಹಿತ ದಂಪತಿಗಳಲ್ಲಿ ಕುಟುಂಬ ಯೋಜನಾವಿಧಾನಗಳ ಬಗ್ಗೆ ಇರಬಹುದಾದ ಜ್ಞಾನ-ಮನೋಭಾವ ಮತ್ತು ಆಚರಣೆಯ ಬಗ್ಗೆ ಪರಿಶೀಲಿಸುವ ಸಲುವಾಗಿ ಈ ಅಧ್ಯಯನವನ್ನು

ಕೈಗೊಳ್ಳಲಾಗಿದೆ. ಹಾಗೂ ಅವರಲ್ಲಿ ಎಷ್ಟರಮಟ್ಟಿಗೆ ಗರ್ಭನಿರೋಧಕಗಳು ಬಳಸಲ್ಪಟ್ಟಿವೆ ಎಂಬುದನ್ನು ತಿಳಿಯಲು ಉದ್ದೇಶಿಸಲಾಗಿದೆ. ಅಧ್ಯಯನಕ್ಕಾಗಿ ಸುಮರು 700 ಮಂದಿ ನವವಿವಾಹಿತ ದಂಪತಿಗಳನ್ನು ಕೋಲಾರ. ಹಾಸನ. ಬಳ್ಳಾರಿ ಮತ್ತು ಧಾರವಾಡ ಈ ನಾಲ್ಕು ಜಿಲ್ಲೆಗಳಿಂದ ಮಾದರಿಗಾಗಿ ಆಯ್ಕೆ ಮಾಡಲಾಗಿದ್ದು. ಅವರುಗಳನ್ನು ಈ ಅಧ್ಯಯನಕ್ಕಾಗಿ ಸಂದರ್ಶಿಸಲಾಗಿದೆ. ಉತ್ತರಿಸಿರುವವರಲ್ಲಿ ಬಹಳಷ್ಟು ಮಂದಿ ಕುಟುಂಬ ಯೋಜನಾ ವಿಧಾನಗಳ ಬಗ್ಗೆ ಅರಿವುಳ್ಳವರಾಗಿದ್ದರೂ ಸಹ, ಅರಿವುಳ್ಳವರಲ್ಲಿ ಹೆಂಗಸರಿಗಿಂತಾ ಗಂಡಸರೇ ಹೆಚ್ಚಾಗಿದ್ದಾರೆ. ಉತ್ತರಿಸುವವರ ಪೈಕಿ ಸುಮಾರು 76 ಮಂದಿ ಕುಟುಂಬ ಯೋಜನ ವಿಧಾನಗಳನ್ನು ಅಳವಡಿಸುವಲ್ಲಿ ಅನುಕೂಲಕರವಾದ ಒಲವನ್ನು ತೋರಿದ್ದಾರೆ. ಉತ್ತರಿಸಿದವರಲ್ಲಿ ಸುಮಾರು ಶೇ. 54 ಮಂದಿ ಎರಡು ಮಕ್ಕಳ ಕುಟುಂಬದ ಗಾತ್ರವನ್ನು ಹೊಂದುವ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ಹೇಗಾದರೂ. ಪ್ರಸ್ತುತ ನವವಿವಾಹಿತ ದಂಪತಿಗಳಲ್ಲಿ ಕೇವಲ ಶೇ. 10 ಮಂದಿ ಮಾತ್ರ ಕುಟುಂಬ ಯೋಜನಾ ವಿಧಾನಗಳನ್ನಾಚರಿಸುತ್ತಿದ್ದುದು ಕಂಡು ಬಂದಿದೆ. ಈ ಅಧ್ಯಯನವು ಪೂರ್ಣಗೊಂಡು ತತ್ಸಂಬಂಧವಾದ ವರದಿಯು ತಯಾರಾಗಿದೆ.

## 4. ಮಕ್ಕಳ ಹುಟ್ಟುತೂಕದ ಬಗ್ಗೆ ಪ್ರಭಾವಬೀರುವ ಅಂಶಗಳ ಅಧ್ಯಯನ

ಭಾರತದಲ್ಲಿ ಜೀವಂತ ಜನನಗಳಲ್ಲಿ ಸುಮಾರು ಶೇ. 30ರಷ್ಟು ಜನನಗಳಲ್ಲಿ ಕಡಿಮೆ ಹುಟ್ಟು ತೂಕವಿರುವ ಶಿಶುಗಳು ಜನಿಸುವರು. (2500 ಗ್ರಾಂಗಳಿಗಿಂತಾ ಕಡಿಮೆ ತೂಕದ) ಕಡಿಮೆ ಹುಟ್ಟು ತೂಕದಿಂದಾಗಿ ಹುಟ್ಟುವ ಶಿಶುಗಳು ಶಾರೀರಿಕವಾಗಿಯೂ ಮತ್ತು ಮಾನಸಿಕವಾಗಿಯೂ ದೌರ್ಬಲ್ಯವುಳ್ಳವರಾಗುವರೆಂಬುದಾಗಿ ಹೇಳಲಾಗಿದೆ. ಆದುದರಿಂದ. ಮಕ್ಕಳ ತೂಕದ ಬಗ್ಗೆ ಪ್ರಭಾವ ಬೀರುವಂತಹ ಅಂಶಗಳನ್ನು ಅಧ್ಯಯನ ಮಾಡುವುದು ಅಗತ್ಯವಾಗಿದೆ. ಈ ಪ್ರಸ್ತುತ ಅಧ್ಯಯನವು ತಾಯಂದಿರಿಗೆ ಸಂಬಂಧಿಸಿದ ಅಂಶಗಳಾದ ಆರೋಗ್ಯ ಮತ್ತು ಪೋಷಣೆಯ ಮಟ್ಟ. ಮತ್ತು ಸಾಮಾಜಿಕ. ಆರ್ಥಿಕ ಹಾಗೂ ಜನಾಂಗ ಸ್ಥಿತಿಯ ಅಂಶಗಳ ಬಗ್ಗೆ ಕೇಂದ್ರೀಕೃತವಾಗಿದೆ. ಈ ಅಧ್ಯಯನಕ್ಕಾಗಿ ಬೆಂಗಳೂರಿನಲ್ಲಿರುವ ಕೆ.ಸಿ.ಜನರಲ್ ಆಸ್ಪತ್ರೆಯಲ್ಲಿ 1993ನೇ ಜುಲೈ. ಆಗಸ್ಟ್. ಸೆಪ್ಟೆಂಬರ್ ತಿಂಗಳುಗಳಲ್ಲಾದ ಜನನಗಳ್ನಾದರಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸುಮಾರು 500 ಜನನಗಳ ಬಗ್ಗೆ ಹುಟ್ಟುತೂಕ ಇತ್ಯಾದಿ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಈ ಸಂಬಂಧವಾಗಿ. ಆಸ್ಪತ್ರೆಯಲ್ಲಿ ತಾಯಂದಿರನ್ನು ಸಂದರ್ಶಿಸಿ ಅವರುಗಳ ಎತ್ತರ ಹಾಗೂ ತೂಕಗಳನ್ನೂ ಅಳೆಯಲಾಯಿತು.

ಈ ಅಧ್ಯಯನವು ತಿಳಿಸುದೇನೆಂದರೆ. ಕಡಿಮೆ ಹುಟ್ಟು ತೂಕದ ಇರುವಿಕೆಯು ಶೇ. ಸುಮಾರು 31ರಷ್ಟಿದ್ದು. ಸರಾಸರಿ ಹುಟ್ಟು ತೂಕವು 2903 ಗ್ರಾಂಗಳಾಗಿದ್ದು. ಇದು ಪ್ರಮಾಣಕ್ಕಿಂತಾ 503 (ಸ್ಟಾಂಡರ್ಡ್ ಡೀವಿಯೇಷನ್‌ನಲ್ಲಿದೆ) ರಷ್ಟು ವಿಚಲಿಸಿದೆ. ಗರ್ಭಾವಸ್ಥೆಯ ವಯಸ್ಸು ಗಮನಾರ್ಹವಾಗಿಯೂ ಮತ್ತು ಧನಾತ್ಮಕವಾಗಿಯೂ ಹುಟ್ಟು ತೂಕಕ್ಕೆ ಸಂಬಂಧಿಸಿದೆ. ಹುಟ್ಟು ತೂಕದ ಮೇಲೆ ತಾಯ್ಂದೆಯರ ಶಿಕ್ಷಣವು ಅಪೇಕ್ಷಿತವಾದ ಪರಿಣಾಮವನ್ನು ಬೀರಿದೆ. 19 ಅಥವಾ ಅದಕ್ಕಿಂತಲೂ ಕಡಿಮೆ ವಯಸ್ಸಿನ ಕಿರಿಯ ತಾಯಂದಿರಲ್ಲಿ ಕಡಿಮೆ ಹುಟ್ಟು ತೂಕದ ಶಿಶುಗಳ ಪ್ರಮಾಣವು ಅಧಿಕ ಪ್ರಮಾಣದಲ್ಲಿ ಕಂಡು ಬಂದಿದೆ.

ಈ ಅಧ್ಯಯನವು ಪೂರ್ಣಗೊಂಡು ವರದಿಯು ತಯಾರಾಗಿದೆ.

### 5. ಮದುವೆಯು ಫಲಕಾರಿಯಾಗುವ ವಯಸ್ಸು ಮತ್ತು ಫಲಶಕ್ತಿ : ಉತ್ತರ ಕರ್ನಾಟಕಕ್ಕೆ ಮಾಹಿತಿಯ ವಿಶ್ಲೇಷಣೆ

ಕರ್ನಾಟಕ ರಾಜ್ಯದ ಉತ್ತರ ಭಾಗದ ಜಿಲ್ಲೆಗಳಲ್ಲಿನ ಗ್ರಾಮಾಂತರ ಪ್ರದೇಶಗಳಲ್ಲಿ 1992ರಲ್ಲಿ ನಡೆಸಲಾದ ಸಮೀಕ್ಷೆಯಲ್ಲಿನ 10,000 ಪ್ರಸ್ತುತ ವಿವಾಹಿತ ಮಹಿಳೆಯರಿಂದ ಫಲಕಾರಿಯಾಗುವ ಮದುವೆಯ ವಯಸ್ಸು, ಜೀವಂತ ಜನನಗಳು, ಜೀವಂತ ಮಕ್ಕಳುಗಳು ಮತ್ತು ಪ್ರಸ್ತುತ ವಯಸ್ಸು ಮೊದಲಾದ ಮಾಹಿತಿಗಳನ್ನು ಬಳಸಿಕೊಂಡು ಮದುವೆಯು ಫಲಕಾರಿಯಾಗುವ ವಯಸ್ಸಿನ ಮೇಲಿನ ಹಾಗೂ ಫಲಶಕ್ತಿಯ ಮೇಲಿನ ಪರಿಣಾಮವನ್ನು ಪರಿಶೀಲಿಸಲು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಮದುವೆಯು ಫಲಕಾರಿಯಾಗುವ ವಯಸ್ಸು ಮತ್ತು ಫಲಶಕ್ತಿಯ ನಡುವಿನ ವಿಪರ್ಯಾಯ (ತಲೆಕೆಳಗಾದ) ಸಂಬಂಧವು ಕಂಡು ಬಂದಿದೆ. ಕುಟುಂಬ ಯೋಜನಾ ವಿಧಾನಗಳಲ್ಲಿನ ಗರ್ಭನಿರೋಧಕಗಳನ್ನು ಉಪಯೋಗಿಸದೇ ಇದ್ದಂತಹ ಮಹಿಳೆಯರಲ್ಲಿ, ಚಿಕ್ಕ ವಯಸ್ಸಿನಲ್ಲಿ ಮದುವೆಯಾದವರು (≤)15 ವರ್ಷಗಳು) 5.93 ಜೀವಂತ ಜನನಗಳನ್ನು ಪಡೆದಿದ್ದಾರೆ. ಆದರೆ ನಿಧಾನಿಸಿ ಮದುವೆ ಆದವರು (20-28 ವರ್ಷಗಳಲ್ಲಿ) ಕೇವಲ 4.77 ಜೀವಂತ ಜನನಗಳನ್ನು ಅವರು ತಮ್ಮ ಸಂತಾನೋತ್ಪತ್ತಿಯನ್ನು ಮುಗಿಸುವ ಕಾಲಕ್ಕೆ (40-49 ವರ್ಷಗಳು). ಇದರರ್ಥವೇನೆಂದರೆ, ನಿಧಾನವಾಗಿ ಮದುವೆಯಾದ ತಂಡದವರಿಗಿಂತಲೂ ಬೇಗನೆ ಮದುವೆಯಾದ ತಂಡದವರು 1.2ರಷ್ಟು ಜೀವಂತ ಜನನಗಳನ್ನು ಹೆಚ್ಚಾಗಿ ಪಡೆದಿದ್ದರು ಎಂಬುದು. ಸಂತಾನಹರಣ ಚಿಕಿತ್ಸೆಯನ್ನು ಪಡೆದವರಲ್ಲಿ, ಮೊದಲು ಮತ್ತು ನಿಧಾನಿಸಿ ಮದುವೆಯಾದವರ ತಂಡಗಳ ಫಲಶಕ್ತಿಯಲ್ಲಿನ ವ್ಯತ್ಯಾಸಗಳು ಗರ್ಭನಿರೋಧಕಗಳನ್ನೇ ಬಳಸದವರಿಗಿಂತಲೂ ಕಡಿಮೆಯಾಗಿದೆ. ಈ ಅಧ್ಯಯನವು ಪೂರ್ಣಗೊಂಡು, ವರದಿಯು ತಯಾರಾಗಿದೆ. ಈ ಅಧ್ಯಯನದಲ್ಲಿ ಕಂಡು ಬಂದ ಅಂಶಗಳನ್ನು ಲಕ್ನೋದಲ್ಲಿ ನಡೆದ ಐ.ಎ.ಎಸ್.ಪಿ. ಸಮ್ಮೇಳನದಲ್ಲಿ 1995ನೇ ಮಾರ್ಚ್ ತಿಂಗಳಿನಲ್ಲಿ ಮಂಡಿಸಲಾಯಿತು.

## V 1995ನೇ ಮಾರ್ಚ್ ತಿಂಗಳ ಕೊನೆಗೆ ಮುಂದುವರೆಯುತ್ತಿರುವ ಅಧ್ಯಯನಗಳು

### 1. ಕರ್ನಾಟಕದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರದ(ಪ್ರಾ ಅ ಕೇ) ಮಟ್ಟದಲ್ಲಿ ಕುಟುಂಬ ಯೋಜನಾ ಸೇವೆಗಳ ಗುಣಮಟ್ಟದ ಬಗ್ಗೆ ಒಂದು ಮೌಲ್ಯಮಾಪನ

ಈ ಅಧ್ಯಯನದಲ್ಲಿ ಕರ್ನಾಟಕದಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ನೀಡಲಾಗುವ ಕುಟುಂಬ ಯೋಜನಾ ಸೇವೆಗಳ ಗುಣಮಟ್ಟವನ್ನು ಅಂದಾಜು ಮಾಡಲಾಗಿದೆ. ಈ

ಅಧ್ಯಯನವು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಲಭ್ಯವಾಗುವ ಅಂತರ್ರಚನಾ ಸೌಲಭ್ಯಗಳಾದ ಶಸ್ತ್ರಕ್ರಿಯಾ ಕೊಠಡಿ. ಪ್ರಸವಕೋಣೆ. ಇತ್ಯಾದಿಗಳು ಮತ್ತಿತರ ಸೌಲಭ್ಯಗಳಾದ ತರಬೇತಿ ಪಡೆದ ಮಾನವ ಶಕ್ತಿ. ಪೂರೈಕೆಗಳು. ಸಾರಿಗೆ ಮೊದಲಾದವುಗಳನ್ನೂ. ಉಪ-ಕೇಂದ್ರಗಳಲ್ಲಿ ಸಿಗುವ ಸೌಲಭ್ಯ ಗಳು. ಆರೋಗ್ಯ ಕಾರ್ಯಕರ್ತರುಗಳಿಂದ ನೀಡಲಾಗುವ ತಾಯಿ ಮಕ್ಕಳ ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವೆಗಳ ಹಾಗೂ ಸಂತಾನಹರಣ ಶಸ್ತ್ರಕ್ರಿಯೆಯ ಶಿಬಿರಗಳ ಗುಣಮಟ್ಟ ವನ್ನು ಅಂದಾಜಿಸಲು ಕೇಂದ್ರೀಕೃತವಾಗಿದೆ.

ಕುಟುಂಬಯೋಜನಾ ಸೇವೆಗಳನ್ನು ನೀಡುವಲ್ಲಿ ಅವುಗಳ ಗುಣಮಟ್ಟದಲ್ಲಿ ಪರಸ್ಪರ ಆಯಾಯ ವಿಭಾಗಗಳ ಮಟ್ಟದಲ್ಲಿ ವ್ಯತ್ಯಾಸಗಳೇನಾದರೂ ಕಂಡುಬರುವುದೋ ಎಂಬುದನ್ನು ತಿಳಿಯಲು ಈ ಅಧ್ಯಯನ ವಿಶ್ಲೇಷಣೆಯನ್ನು ವಿಭಾಗದ ಮಟ್ಟದಲ್ಲಿಯೇ ಮಾಡಲಾಗುವುದು.

ಅಧ್ಯಯನದ ಮಾದರಿಯನ್ನು ಕರ್ನಾಟಕ ರಾಜ್ಯದಲ್ಲಿ ವ್ಯಾಪಕವಾಗಿರುವ ನಾಲ್ಕು ವಿಭಾಗಗಳಿಂದಲೂ ಅಂದರೆ 12 ಪ್ರಾಥಮಿಕ ಆರೋಗ್ಯ ಕೇಂದ್ರಗಳು. 24 ಉಪ -ಕೇಂದ್ರಗಳು. ಮತ್ತು 24 ಗ್ರಾಮಗಳಿಂದ ಆಯ್ಕೆ ಮಾಡಲಾಗಿದೆ. ಕುಟುಂಬ ಯೋಜನಾ ಸೌಲಭ್ಯಗಳನ್ನು ಪಡೆದಂತಹ ಸುಮಾರು 600 ಮಂದಿ ಫಲಾನುಭವಿಗಳನ್ನು ಸಂದರ್ಶಿಸಲಾಯಿತು. ಒಟ್ಟಾರೆ. 12 ಕುಟುಂಬ ಯೋಜನಾ ಶಸ್ತ್ರಚಿಕಿತ್ಸಾ ಶಿಬಿರ(ಸಂತಾನಹರಣ)ಗಳನ್ನು ವೀಕ್ಷಿಸಲಾಯಿತು. ಶಸ್ತ್ರಚಿಕಿತ್ಸೆ ಪಡೆದವರಲ್ಲಿ ಸುಮಾರು 133 ಫಲಾನುಭವಿಗಳನ್ನೂ ವೀಕ್ಷಿಸಲಾಯಿತು.

ತತ್ಸಂಬಂಧವಾದ ಮಾಹಿತಿಯ ತಃಖ್ತೆಕಾರ್ಯವು ಮುಂದುವರೆದಿದೆ.

## 2. ಕರ್ನಾಟಕದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮದ ಮೌಲ್ಯಮಾಪನ

ಈ ಅಧ್ಯಯನದ ಮುಖ್ಯೋದ್ದೇಶವು ಹೀಗಿದೆ.

1 ಕರ್ನಾಟಕದ ವಿವಿಧ ವಿಭಾಗಗಳಲ್ಲಿನ ಕುಟುಂಬ ಯೋಜನಾ ಕಾರ್ಯಗತಿಯನ್ನು ಕಾಲಕ್ರಮೇಣ ವಿವಿಧ ಕುಟುಂಬ ಯೋಜನಾ ಪದ್ಧತಿಗಳಿಗನುಸಾರವಾಗಿ ವಿಶ್ಲೇಷಣೆ ಮಾಡುವುದು.

2. ಕಾರ್ಯಕ್ರಮದ ಪ್ರಭಾವವು ಫಲಶಕ್ತಿಯ ಮೇಲೆ ಹೇಗಾಗಿದೆ ಎಂಬಂಶವನ್ನು ತುಲನೆ ಮಾಡುವುದು.

3. ಪ್ರತಿ ಒಂದು ಹುಟ್ಟನ್ನು ತಡೆಗಟ್ಟಿದಾಗ ಸಂಭವಿಸುವ ವೆಚ್ಚವನ್ನೂ ಅಂದಾಜು ಮಾಡುವುದು.

4. ಕುಟುಂಬ ಯೋಜನಾ ವಿಧಾನಗಳನ್ನು ಅಂಗೀಕರಿಸುವವರಲ್ಲುಂಟಾದ ಬದಲಾವಣೆಗಳನ್ನು ವಿಶ್ಲೇಷಿಸುವುದು ಮತ್ತು

5. ಕುಟುಂಬ ಯೋಜನಾ ಕಾರ್ಯಗತಿಯ ಮೇಲೆ ಪ್ರಭಾವ ಬೀರುವ ಕೆಲವು ಅಂಶಗಳನ್ನು ಅಧ್ಯಯನ ಮಾಡುವುದು.

ತತ್ಸಂಬಂಧವಾದ ಮಾಹಿತಿಯ ವಿಶ್ಲೇಷಣೆ ಕಾರ್ಯವು ಮುಂದುವರಿದಿದೆ.

### 3. ಕರ್ನಾಟಕ ಸರ್ಕಾರದ ನೌಕರರಲ್ಲಿ ಫಲಶಕ್ತಿ, ಮರಣ ಹಾಗೂ ಕುಟುಂಬ ಯೋಜನಾ ವಿಧಾನಗಳ ಆಚರಣೆ

ಜನಸಂಖ್ಯಾ ಸಮಸ್ಯೆಯನ್ನು ನಿವಾರಿಸುವಲ್ಲಿ ಜನಾಂಗದ ವಿವಿಧ ತುಣುಕುಗಳ ಅಧ್ಯಯನವು ಹಲವಾರು ಉಪಯುಕ್ತ ಸುಳಿವುಗಳನ್ನು ನೀಡಬಹುದು. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ನೌಕರರಲ್ಲಿನ ಫಲಶಕ್ತಿ. ಮರಣ ಮತ್ತು ಕುಟುಂಬ ಯೋಜನಾ ವಿಧಾನಗಳ ಆಚರಣೆಯ ಬಗ್ಗೆ ಈ ಅಧ್ಯಯನವನ್ನು ಆರಂಭಿಸಲಾಗಿದೆ. ಈ ಸರ್ಕಾರಿ ನೌಕರರು ಜನಾಂಗದ ಪೂರ್ತಾ ಪ್ರಾತಿನಿಧ್ಯವನ್ನು ತೋರದಿದ್ದರೂ ಕೂಡಾ. ಸಾಮಾಜಿಕ ಹಾಗೂ ಆರ್ಥಿಕವಾಗಿ ವಿವಿಧ ಮಟ್ಟದಲ್ಲಿರತಕ್ಕಂತಹ ನೌಕರರಿಂದ ಪಡೆದ ಮಾಹಿತಿಯ ವಿಶ್ಲೇಷಣೆಯು ಮೌಲ್ಯಭರಿತವಾದ ಒಂದು ಒಳ ದೃಷ್ಟಿಯನ್ನು ಬೀರಬಹುದು. ಕರ್ನಾಟಕ ಸರ್ಕಾರಿ ನೌಕರರಲ್ಲಿ ಎ. ಬಿ. ಸಿ ಮತ್ತು ಡಿ ಎಂಬುದಾಗಿ ನಾಲ್ಕು ವರ್ಗಗಳಿವೆ. ಎ ಮತ್ತು ಬಿ ವರ್ಗಗಳು ಅಧಿಕಾರಿಗಳ ಮಟ್ಟದಲ್ಲಿರುವುದರಿಂದ. ಅವೆರಡನ್ನೂ ಒಟ್ಟುಗೂಡಿಸಿ ಅಧ್ಯಯನ ಮಾಡಲು ಉದ್ದೇಶಿಸಲಾಯಿತು. ಒಟ್ಟು ಅಧ್ಯಯನಕ್ಕಾಗಿ 1500 ಉದ್ಯೋಗಿಗಳ ಮಾದರಿಯೊಂದನ್ನು ಆಯ್ಕೆ ಮಾಡಲಾಯಿತು. ವರದಿಯ ಕರಡು ಪ್ರತಿಯೊಂದು ತಯಾರಾಗಿದೆ.

### 4. ಪುರುಷ ಸಂತಾನಹರಣ ಶಸ್ತ್ರಕ್ರಿಯೆ (ವ್ಯಾಸೆಕ್ಟಮಿ)ಯ ಬೇಡಿಕೆಯ ಇಳಿಮುಖಕ್ಕೆ ಕಾರಣಗಳು : ಒಂದು ಅಧ್ಯಯನ

ಕುಟುಂಬ ಯೋಜನಾ ವಿಧಾನಗಳಲ್ಲಿ ತಾತ್ಕಾಲಿಕ ಹಾಗೂ ಶಾಶ್ವತವಾದ ವಿಧಾನಗಳ ಸೇವೆಯು ಲಭ್ಯವಿದ್ದರೂ. ಬೇಡಿಕೆಯು ಮಾತ್ರ ಶಾಶ್ವತವಾದ ವಿಧಾನದ (ಸಂತಾನಹರಣ ಶಸ್ತ್ರಕ್ರಿಯೆ) ಬಗ್ಗೆಯೇ ಇದೆ. ಈ ಸಂಗತಿಯು ಕರ್ನಾಟಕ ರಾಜ್ಯದಲ್ಲಿರುವಂತೆಯೇ ದೇಶಕ್ಕೂ ಅನ್ವಯಿಸುತ್ತದೆ

ಕಾಲಕ್ರಮೇಣ, ಬೇಡಿಕೆಯು ಗಂಡಸರ ಸಂತಾನಹರಣ ಶಸ್ತ್ರಕ್ರಿಯೆಯಿಂದ ಹೆಂಗಸರ ಸಂತಾನಹರಣ ಶಸ್ತ್ರಕ್ರಿಯೆಯತ್ತ ಬದಲಾಗಿದೆ. ಕರ್ನಾಟಕದಲ್ಲಿ, 1988ರಿಂದ 89ರವರೆಗೆ ನಡೆಸಿದ ಸಂತಾನಹರಣ ಶಸ್ತ್ರಕ್ರಿಯೆಗಳಲ್ಲಿ ಗಂಡಸರ ಸಂತಾನಹರಣ ಶಸ್ತ್ರಕ್ರಿಯೆಗಳಲ್ಲಿ ಗಂಡಸರ ಸಂತಾನಹರಣ ಶಸ್ತ್ರಕ್ರಿಯೆಯು ಶೇ. 1ಕ್ಕಿಂತಲೂ ಕಡಿಮೆ ಪ್ರಮಾಣದಲ್ಲಿದೆ. ಈ ಶಸ್ತ್ರಕ್ರಿಯೆಯನ್ನು ಅಂಗೀಕರಿಸುವಲ್ಲಿ ಗಂಡಸರೂ ಸಹ ಮುಂದೆ ಬರಲೇಬೇಕಾದ ಅಗತ್ಯವಿರುತ್ತದೆ. ವ್ಯಾಸೆಕ್ಟಮಿಯ ಅಳವಡಿಸುವಿಕೆಯನ್ನು ಉತ್ತೇಜಿಸಲು ಈ ಕೆಳಕಾಣಿಸಿದ ಉದ್ದೇಶಗಳನ್ನುಳ್ಳ ಅಧ್ಯಯನವೊಂದನ್ನು ಕೈಗೊಳ್ಳಲಾಗಿದೆ.

1. ಸಂತಾನಹರಣ ಶಸ್ತ್ರಕ್ರಿಯೆಯಲ್ಲಿ ಪಾಲ್ಗೊಂಡವರ ಸಾಮಾಜಿಕ - ಆರ್ಥಿಕ ಮತ್ತು ಜನಸಂಖ್ಯೆಯ ವಿವಿಧ ರೂಪುರೇಷೆಗಳನ್ನು ಪರೀಕ್ಷಿಸಲು ಹಾಗೂ ಸಂಬಂಧಿಸಿದ ಕಾರ್ಯಕ್ರಮದ ಸಿಬ್ಬಂದಿವರ್ಗದವರನ್ನು ಅಭ್ಯಸಿಸಲು;
2. ವ್ಯಾಸೆಕ್ಟಮಿಯ ಬೇಡಿಕೆಯು ಕಡಿಮೆಯಾಗಿರುವುದಕ್ಕೆ ಕಾರಣಗಳನ್ನು ಗುರ್ತಿಸಲು

ಮತ್ತು

3. ವ್ಯಾಸೆಕ್ಟಮಿಯ ಬೇಡಿಕೆಯು ಅಧಿಕವಾಗುವಂತೆ ಮಾಡಲು ಮಾರ್ಗೋಪಾಯಗಳನ್ನು ಸೂಚಿಸಲು.

ಗ್ರಾಮಾಂತರ ಹಾಗೂ ನಗರ ಪ್ರದೇಶಗಳೂ ಸೇರಿದಂತೆ 387 ಉದರದರ್ಶಕ ಮತ್ತು 824 ಹೆಂಗಸರ ಸಂತಾನಹರಣ ಶಸ್ತ್ರಕ್ರಿಯೆ(ಟ್ಯುಬೆಕ್ಟಮಿ)ಯನ್ನು ಪಡೆದವರಿಗೆ ಹೋಲಿಸಿದಾಗ ಗ್ರಾಮಾಂತರ ಹಾಗೂ ನಗರ ಪ್ರದೇಶಗಳಿಂದ ಕೇವಲ 10 ಮಂದಿ ವ್ಯಾಸೆಕ್ಟಮಿ ಅಂಗೀಕರಿಸಿದ ವರನ್ನು ಮಾತ್ರ ಅಧ್ಯಯನ ಮಾಡಲು ಸಾಧ್ಯವಾಯಿತು.

ವರದಿಯ ಕರಡು ತಯಾರಿಕೆಯಲ್ಲಿದೆ

**5. ಬೆಳಗಾಂ ಮತ್ತು ಕೋಲಾರ ಜಿಲ್ಲೆಗಳಲ್ಲಿ ಆಧಾರರೇಖಾ ಮತ್ತು ಸೌಲಭ್ಯಗಳ ಸಮೀಕ್ಷೆಗಳು ನೊರಾಡ್ ಯೋಜನೆ**

ಕರ್ನಾಟಕ ರಾಜ್ಯದ ಬೆಳಗಾಂ ಮತ್ತು ಕೋಲಾರ ಜಿಲ್ಲೆಗಳಲ್ಲಿನ ಪ್ರಸವೋತ್ತರ ಕಾರ್ಯಕ್ರಮದ(ಬಾಣಂತನ ಸೇವಾ ಕಾರ್ಯಕ್ರಮ) ನೊರಾಡ್ ನೆರವಿನ ನವೀನ ರೀತಿಯ ಯೋಜನೆಗೆ ಸಂಬಂಧಿಸಿದಂತೆ ಈ ಎರಡೂ ಜಿಲ್ಲೆಗಳಲ್ಲಿ ಒಂದು ಆಧಾರರೇಖಾ ಸಮೀಕ್ಷೆ ಮತ್ತು ಸೌಲಭ್ಯಗಳ ಸಮೀಕ್ಷೆಯನ್ನು ನಡೆಸಲು ಬೆಂಗಳೂರಿನಲ್ಲಿರುವ ಜನಸಂಖ್ಯಾ ಕೇಂದ್ರಕ್ಕೆ ಜವಾಬ್ದಾರಿಯನ್ನು ವಹಿಸಲಾಯಿತು. ಈ ಸಮೀಕ್ಷೆಗಳನ್ನು ಮೇ. ಜೂನ್ 1994ರಲ್ಲಿ ನಡೆಸ ಲಾಯಿತು. ಆಧಾರರೇಖಾ ಸಮೀಕ್ಷೆಯ ಉದ್ದೇಶ್ಯವು ಈ ಎರಡು ಜಿಲ್ಲೆಗಳಲ್ಲೂ. ಫಲಶಕ್ತಿ ಮತ್ತು ಮರಣದ ದರಗಳನ್ನು. ತಾಯಿ ಮತ್ತು ಮಕ್ಕಳ ಆರೋಗ್ಯ ಗಮನ. ರೋಗನಿರೋಧಕ ವ್ಯಾಪಕತೆ ಮತ್ತುಕುಟುಂಬ ಯೋಜನಾ ಅನುಷ್ಠಾನಗಳ ಬಗ್ಗೆ ಅಧ್ಯಯನ ಮಾಡುವುದಾಗಿದೆ. ಸೌಲಭ್ಯ ಸಮೀಕ್ಷೆಯು ಎರಡು ಜಿಲ್ಲೆಗಳಲ್ಲೂ ಪ್ರಸವೋತ್ತರ ಸೇವಾ ಕೇಂದ್ರಗಳು ಮತ್ತು ಪ್ರಸವೋತ್ತರ ಸೇವಾಕೇಂದ್ರಗಳಿಗೆ ನೆರವಾಗುತ್ತಿರುವ ಆರೋಗ್ಯ ಸಂಸ್ಥೆಗಳಲ್ಲಿ ಸಿಗಬಹುದಾದ ಸಿಬ್ಬಂದಿ ಸ್ಥಾನ. ಉಪಕರಣಗಳು ಮುಂತಾದವುಗಳ ಬಗ್ಗೆ ಅಗತ್ಯವಾದ ಮಾಹಿತಿಯನ್ನೊದಗಿ ಸುವುದಾಗಿದೆ.

ಪ್ರತಿಯೊಂದು ಜಿಲ್ಲೆಯಲ್ಲಿಯೂ ಆಧಾರರೇಖಾ ಸಮೀಕ್ಷೆಗೆ ಮಾದರಿಯಾಗಿ 1500 ಮನೆಗಳನ್ನು ಆಯ್ಕೆ ಮಾಡಲಾಗಿದೆ. ಸೌಲಭ್ಯಗಳ ಸಮೀಕ್ಷೆಗಾಗಿ. ಬೆಳಗಾಂ ಜಿಲ್ಲೆಯಲ್ಲಿನ 50 ಸಂಸ್ಥೆಗಳನ್ನೂ ಮತ್ತು ಕೋಲಾರ ಜಿಲ್ಲೆಯಲ್ಲಿನ 73 ಸಂಸ್ಥೆಗಳನ್ನೂ ಆಯ್ಕೆ ಮಾಡಲಾಗಿದೆ.

ಈ ಅಧ್ಯಯನವು ಪೂರ್ಣಗೊಂಡು ತತ್ಸಂಬಂಧವಾದ ಕರಡು ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

**6. ಕರ್ನಾಟಕದಲ್ಲಿನ ಗಿರಿಜನರ(ಆದಿವಾಸಿ) ಆಧಾರರೇಖಾ ಸಮೀಕ್ಷೆ**

ಒಂಭತ್ತನೇ ಭಾರತ ಜನಸಂಖ್ಯಾ ಯೋಜನೆಯ ಮುಖ್ಯ ಉದ್ದೇಶಗಳಲ್ಲಿ ಒಂದು ಗಿರಿಜನರ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸ್ಥಿತಿಯನ್ನು ಉತ್ತಮಪಡಿಸುವುದೇ ಆಗಿದೆ. ಈ ಯೋಜನೆಯ ಮೌಲ್ಯಮಾಪನ ಕಾರ್ಯಕ್ಕೆ ಸಹಕರಿಸುವಲ್ಲಿ, ಗಿರಿಜನರ ಬಗ್ಗೆ ಒಂದು ಆಧಾರರೇಖಾ ಸಮೀಕ್ಷೆಯ ಅಗತ್ಯವಿದೆ. ಆದುದರಿಂದ, ಈ ಗಿರಿಜನರ ಸಮೀಕ್ಷೆಯನ್ನು ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು ಹಾಗೂ ಮೈಸೂರಿನ ಜಿಲ್ಲೆಗಳಲ್ಲಿ ಕೈಗೊಳ್ಳಲಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲಿಯೂ ಅತ್ಯಂತ ಆದಿಮ(ಪ್ರಿಮಿಟಿವ್) ಮತ್ತು ಬಾಹುಳ್ಯವಿರುವ ಜನಾಂಗವನ್ನು ಸಮೀಕ್ಷೆಗಾಗಿ ಪರಿಗಣಿಸಲಾಗಿದೆ. ಹೀಗೆ, ಅಧ್ಯಯನಕ್ಕೆ ಆಯ್ಕೆಯಾದ ಜನಾಂಗವು ಕ್ರಮವಾಗಿ ಚಿಕ್ಕಮಗಳೂರು, ದಕ್ಷಿಣ ಕನ್ನಡ ಮತ್ತು ಮೈಸೂರಿನಲ್ಲಿ ಹಸಲರು, ಕೊರಗ, ಜೇನು ಕುರಬ ಮತ್ತು ಸೋಲಿಗರಾಗಿದ್ದಾರೆ. ಪ್ರತಿಯೊಂದು ಜಿಲ್ಲೆಯಿಂದಲೂ ಮಾದರಿಗಾಗಿ ತಲಾ 600 ಮನೆಗಳನ್ನು ಆಯ್ಕೆ ಮಾಡಲಾಗಿದೆ.

## VI 1995-96ಕ್ಕೆ ಉದ್ದೇಶಿಸಲಾಗಿರುವ ಕಾರ್ಯಕ್ರಮಗಳು

### 1. ಪ್ರಸ್ತುತ ಅಧ್ಯಯನಗಳು ಪೂರ್ಣಗೊಳ್ಳುವಿಕೆ

ಈ ಹಿಂದೆ ತಿಳಿಸಿದಂತಹ ಆರು ಅಧ್ಯಯನಗಳು 1995-96ರ ವೇಳೆಗೆ ಪೂರ್ಣಗೊಳ್ಳುವುದು

### 2. ಹೊಸದಾಗಿ ಕೈಗೊಳ್ಳಬೇಕಾಗಿರುವ ಅಧ್ಯಯನಗಳು

1995-96ರಲ್ಲಿ ಈ ಕೆಳಕಂಡ ಅಧ್ಯಯನಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ :

1. ಆಧಾರರೇಖಾ ಸಮೀಕ್ಷೆ, ಭಾರತ ಜನಸಂಖ್ಯಾ ಯೋಜನೆ -9
2. ಅಂಗನವಾಡಿ ಕಾರ್ಯಕರ್ತರುಗಳಿಂದ ಜನನ ಮತ್ತು ಮರಣಗಳ ಅಪ-ವರದಿಯ ಮಟ್ಟದ ಬಗ್ಗೆ ಒಂದು ಅಧ್ಯಯನ
3. ಅರಕ್ಷಿತ ಗರ್ಭಪಾತಗಳ ಬಗ್ಗೆ ಒಂದು ಅಧ್ಯಯನ
4. ಏಯ್ಡ್ಸ್ ಬಗ್ಗೆ ಅರಿವು
5. ಗರ್ಭಿಣಿ ಸ್ತ್ರೀಯರಲ್ಲಿ ಲಿಂಗ ಪ್ರಾಶಸ್ತ್ಯ ಮತ್ತು ಕಾತರ
6. ಮಾತೆಯ ಮರಣದ ಬಗ್ಗೆ ಒಂದು ಅಧ್ಯಯನ

### 3. ವಿಚಾರಗೋಷ್ಠಿಗಳು ಮತ್ತು ಕಾರ್ಯಾಗಾರಗಳು

1. ಸಂತಾನೋತ್ಪತ್ತಿಯ ಆರೋಗ್ಯದ ಬಗ್ಗೆ ಒಂದು ಕಾರ್ಯಾಗಾರವನ್ನು ವ್ಯವಸ್ಥೆಗೊಳಿಸಲಾಗುವುದು. ಈ ಉದ್ದೇಶಕ್ಕಾಗಿ, ಜನಸಂಖ್ಯಾ ಅಧ್ಯಯನಕ್ಕಾಗಿರುವ ಭಾರತೀಯ ಸಂಸ್ಥೆಯಿಂದ ರೂ. 25,000.00 ಮೊತ್ತವನ್ನು ಸ್ವೀಕರಿಸಲಾಗಿದೆ.
2. ಭಾರತ ಜನಸಂಖ್ಯಾ ಯೋಜನೆ-9ಯ ಆಧಾರರೇಖಾ ಸಮೀಕ್ಷೆಯ ಹೊರಗೆಡಹಿದ ಅಂಶಗಳನ್ನು ಕುರಿತು ಒಂದು ವಿಚಾರಗೋಷ್ಠಿಯನ್ನು ನಡೆಸಲು ಉದ್ದೇಶಿಸಲಾಗಿದೆ.

7674-F-10